ತಂತ್ರಸಾರೋಕ್ತ

# ದೇವತಾಪ್ರತಿಷ್ಠಾವಿಧಿಸಂಗ್ರಹ:

## ನಾಗಪ್ರತಿಷ್ಠಾ-ಚಕ್ರಾಬ್ಜಮಂಡಲಪೂಜಾ-ಬ್ರಹ್ಮಕಲಶ ಇತ್ಯಾದಿ

ಶ್ರೀಹರಿವಾಯು ಪ್ರಕಾಶನ
ನಂ: 2840 ಪದ್ಮಾಲಯ, 1 ನೇ ಮುಖ್ಯ ರಸ್ತೆ, ಜಯನಗರ, ಮೈಸೂರು.



ತಂತ್ರಸಾರೋಕ್ತ

# ದೇವತಾಪ್ರತಿಷ್ಠಾವಿಧಿಸಂಗ್ರಹಃ

ನಾಗಪ್ರತಿಷ್ಠಾ – ಚಕ್ರಾಬ್ಜಮಂಡಲಪೂಜಾ – ಬ್ರಹ್ಮಕಲಶ ಇತ್ಯಾದಿ

॥ श्रीमान् विठ्ठलाचार्यः ॥


ಸಂಪಾದಕರು

ವಿದ್ವಾನ್ ವಿಟ್ಠಲಾಚಾರ್ಯ, ನಂದಳಿಕೆ



ಪ್ರಕಾಶಕರು

ವಿದ್ವಾನ್ ಡಾ। ಬೆ. ನಾ. ವಿಜಯೀಂದ್ರಾಚಾರ್ಯ

ಶ್ರೀಹರಿವಾಯು ಪ್ರಕಾಶನ, ಮೈಸೂರು

೨೦೧೬

# ತಂತ್ರಸಾರೋಕ್ತ ದೇವತಾಪ್ರತಿಷ್ಠಾವಿಧಿ ಸಂಗ್ರಹಃ

(ನಾಗಪ್ರತಿಷ್ಠಾ - ಚಕ್ರಾಬ್ಜಮಂಡಲಪೂಜಾ - ಬ್ರಹ್ಮಕಲಶ ಇತ್ಯಾದಿ)


ಸಂಗ್ರಹ ಮತ್ತು ಸಂಪಾದನೆ

**ವಿದ್ವಾನ್ ನಂದಳಿಕೆ ವಿಟ್ಠಲಾಚಾರ್ಯ**

'ಶ್ರೀಪ್ರಾಣನಿಲಯ', ಕಂಗುಹಿತ್ತಿಲು, ನಂದಳಿಕೆ ಪೋಸ್ಟ್-೫೭೬೧೧೧

ಕಾರ್ಕಳ ತಾಲೂಕು, ಉಡುಪಿ ಜಿಲ್ಲೆ. ☎ : 9448108421



ಪ್ರಕಾಶಕರು

**ಬೆ. ನಾ. ವಿಜಯೀಂದ್ರಾಚಾರ್ಯ ಮೈಸೂರು**

**ಶ್ರೀಹರಿವಾಯು ಪ್ರಕಾಶನ,** ೨೮೪೦/೧, 'ಪದ್ಮಾಲಯ', ಒಂದನೇ ಮುಖ್ಯರಸ್ತೆ

ಜಯನಗರ, ಮೈಸೂರು - ೧೪. ☎ : 9448813696

E-mail :*vijayeendra.bena@gmail.com*





ಪ್ರಕಟನವರ್ಷ : ೨೦೧೬

ಪುಟಗಳು : ೧೦ + 166

**ಬೆಲೆ : 140-00**


**ಈ ಗ್ರಂಥವು ೧೭-೦೨-೨೦೧೬ ಮನ್ಮಥ ಸಂವತ್ಸರ ಮಾಘಶುದ್ಧ ದಶಮೀ ತಿಥಿಯಂದು ಚಾಂದ್ರ ಮಧ್ವನವಮೀಸಂದರ್ಭದಲ್ಲಿ ಪರ್ಯಾಯ ಶ್ರೀ ಪೇಜಾವರ ಪರಮಪೂಜ್ಯ ಶ್ರೀಶ್ರೀ ವಿಶ್ವೇಶತೀರ್ಥಶ್ರೀಪಾದರಿಂದ ತಮ್ಮ ಪಂಚಮ ಪರ್ಯಾಯಾವಧಿಯಲ್ಲಿ ಶ್ರೀಕೃಷ್ಣಮುಖ್ಯಪ್ರಾಣದೇವರ ಸನ್ನಿಧಾನದಲ್ಲಿ ಶ್ರೀಹರಿ ವಾಯುಗುರುಗಳಿಗೆ ಸಮರ್ಪಿತವಾಯಿತು.**


ಅಕ್ಷರಸಂಯೋಜನೆ : 'ಶ್ರೀನವದುರ್ಗಾ ಲೇಸರ್‌ಟೆಕ್', ಉಡುಪಿ. (Mob : 9342438727)

ಮುದ್ರಕರು : ಪವನ್ ಪ್ರಿಂಟರ್ಸ್, ಬೆಂಗಳೂರು.

# ಪ್ರಕಾಶಕರ ನುಡಿ

**ನಾಗನಾಗೇಂದ್ರಶಯನಂ ನಾಗಾನಾಮಧಿಪ ಪ್ರಭೋ ।**
**ಆಗಮಸ್ತುತ ಚಾರಿತ್ರಂ ಯೋಗೀಂದ್ರ ಪ್ರಿಯದರ್ಶಯ ॥**

ದಕ್ಷಿಣಕನ್ನಡ ಜಿಲ್ಲೆಯಲ್ಲಿ ನಾಗಾರಾಧನೆ-ಬ್ರಹ್ಮಕಲಶ-ದೇವತಾಪ್ರತಿಷ್ಠೆ-ನಾಗಪ್ರತಿಷ್ಠಾ ವಿಧಿಗಳು ಯಜ್ಞ-ಯಾಗಗಳು ತುಂಬ ಮಹತ್ವದ ಕ್ರಿಯೆಗಳಾಗಿ ಬೆಳೆದು ಬಂದಿವೆ. ಇಂತಹ ಕ್ರಿಯೆಗಳನ್ನು ಹೇಗೆ ನಡೆಸಬೇಕೆಂದು ಶ್ರೀಮದಾ-ಚಾರ್ಯರು ತಂತ್ರಸಾರದಲ್ಲಿ ತಿಳಿಸಿಕೊಟ್ಟಿದ್ದಾರೆ. ಇವುಗಳ ಬಗ್ಗೆ ಸರಿಯಾದ ಕ್ರಮವನ್ನು ಅನುಸರಿಸಿ ದೇವತಾಪ್ರತಿಷ್ಠೆಗಳನ್ನು ನಡೆಸಬೇಕೆಂದು ಪ್ರತಿಷ್ಠಾವಿಧಿಗಳಲ್ಲಿ ನುರಿತ ವಿದ್ವಾಂಸರಾದ ಶ್ರೀಯುತ ವಿಟ್ಠಲಾಚಾರ್ಯ ನಂದಳಿಕೆ, ಇವರು ಬಹಳ ಸುಂದರವಾದ ಗ್ರಂಥಕುಸುಮವನ್ನು ಸಿದ್ಧಗೊಳಿಸಿದ್ದಾರೆ. ಅನೇಕ ಪ್ರತಿಷ್ಠಾ ವಿಧಿಗಳನ್ನು ಹಿರಿಯ ಅನುಭವಿ ವಿದ್ವಾಂಸರ ಜೊತೆಗೆ ನಡೆಸಿ ಇಂದು ಸ್ವತಃ ಪ್ರತಿಷ್ಠಾವಿಧಿಗಳನ್ನು ನಡೆಸುವಲ್ಲಿ ಅಗ್ರಗಣ್ಯರೆನಿಸಿದ್ದಾರೆ.

ಈಗಾಗಲೇ 'ಯಜ್ಞಮಹೋದಧಿ' ಎಂಬ ಇವರ ಕೃತಿಯು ಮೆಚ್ಚುಗೆಯನ್ನು ಗಳಿಸಿದ್ದು ಈ ಕೃತಿಯು ಇವರ ಎರಡನೇ ಗ್ರಂಥಕುಸುಮವಾಗಿ ಹೊರಹೊಮ್ಮಿದೆ. ಇದರಲ್ಲಿ ನಾಗದೇವರ ಬಗ್ಗೆ ಅಪೂರ್ವವಾದ ನಾಗಸಹಸ್ರನಾಮವನ್ನೂ ನೀಡಲಾಗಿದೆ. ಇದು ಹಿಂದೆ ಎಲ್ಲಿಯೂ ಪ್ರಕಟವಾದಂತಿಲ್ಲ. ಈ ಗ್ರಂಥಕುಸುಮವು ಎಲ್ಲ ಪುರೋಹಿತ ಸಮುದಾಯದ ಶಿರೋಭೂಷಣವಾಗಿ ಪ್ರಕಾಶಿಸಲೆಂದು ಹಾರೈಸುತ್ತಾ ಈ ಕೃತಿಯ ನಿರ್ಮಾಣದಲ್ಲಿ ಸಹಕರಿಸಿದ ಸಕಲರಿಗೂ ವಿದ್ವಾನ್ ವಿಟ್ಠಲಾಚಾರ್ಯರಿಗೂ ಸಂಸ್ಥೆಯ ವತಿಯಿಂದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅನುಗ್ರಹ ಆತ್ಮೋದ್ಧಾರಕರಾದ ಪರಮಪೂಜ್ಯ ಶ್ರೀಶ್ರೀ ವಿಶ್ವೇಶತೀರ್ಥಶ್ರೀಪಾದರಿಗೆ ಶ್ರೀಶ್ರಿ ವಿಶ್ವಪ್ರಸನ್ನತೀರ್ಥಶ್ರೀಪಾದರಿಗೆ ಅನಂತ ಸಾಷ್ಟಾಂಗ ನಮನಗಳು.

ನಿಮ್ಮ ವಿಧೇಯ,

**ವಿದ್ವಾನ್ ಡಾ। ಬೆ. ನಾ. ವಿಜಯೀಂದ್ರಾಚಾರ್ಯ**, ಮೈಸೂರು
ಪ್ರಕಾಶಕರು
ಶ್ರೀಹರಿವಾಯು ಪ್ರಕಾಶನ.

# ಮೊದಲ ಮಾತು

**ಅನಂತಾನಂತದೇವೇಶ ಅನಂತ ಫಲದಾಯಕ ।**
**ಅನಂತ ದುಃಖ ನಾಶಾಯ ಅನಂತಾಯ ನಮೋ ನಮಃ ॥**

ಪ್ರತಿಯೊಬ್ಬ ಮನುಷ್ಯಜೀವಿಯು ಸುಖವನ್ನು ಬಯಸುತ್ತಾನೆ. ದುಃಖವನ್ನು ಎಂದೆಂದೂ ಯೋಚಿಸುವುದಿಲ್ಲ. ಪುಣ್ಯಕರ್ಮದಿಂದ ಹಾಗೂ ದೇವಪ್ರಸಾದದಿಂದ ತಾನು ಮಾಡಿದ ಸುಖಪ್ರಾಪ್ತಿ; ಪಾಪಕರ್ಮದಿಂದ ದುಃಖಲಾಭವಾಗುವುದು. ಪುಣ್ಯಕರ್ಮಮಾರ್ಗವು ಹಲವಿವೆ; ಅದರಲ್ಲೊಂದು ದೇವತಾ ಪ್ರತಿಮಾರಾಧನೆ. ಋಷಿಮುನಿಗಳೆಲ್ಲ ಜ್ಞಾನಿಗಳು. ಅವರು ಮಾನಸ ಉಪಾಸನೆಮಾಡಿ ದೇವತಾನುಗ್ರಹ ಪಡೆಯಬಲ್ಲರು. ಕಲಿಯುಗದಲ್ಲಿ ಅಂತಹ ಜ್ಞಾನಿಗಳು ವಿರಳ. ಆದ್ದರಿಂದಲೇ ಆಚಾರ್ಯಮಧ್ವರು **'ಪ್ರತಿಮಾಸು ಅಪ್ರಬುದ್ಧಾನಾಂ'** ಎಂಬುದಾಗಿ ಪ್ರತಿಮಾಮಾಧ್ಯಮ ದಿಂದ ದೇವತಾರಾಧನೆ ನಿರೂಪಿಸಿದ್ದಾರೆ. ಭಗವಂತನು ವಿಷ್ಣುಭಕ್ತರಾದ ಬ್ರಹ್ಮರುದ್ರೇಂದ್ರಾದಿ ದೇವತೆಗಳನ್ನು ಸೃಷ್ಟಿಮಾಡಿ ಪ್ರತಿಯೊಬ್ಬರಿಗೂ ಒಂದೊಂದು ಕರ್ತವ್ಯವನ್ನು ನಿರೂಪಿಸಿದ್ದಾನೆ. ಅವನ ಆಜ್ಞೆಯಂತೆ ಹರಿಭಕ್ತರಾದ ಅವರು ಚಾಚೂತಪ್ಪದೆ ತಮ್ಮ ಕರ್ತವ್ಯವನ್ನು ಪರಿಪಾಲನೆ ಮಾಡುತ್ತಾರೆ. ಅಂತಹ ತತ್ತ್ವಾಭಿಮಾನಿದೇವತೆಗಳ ಮುಖಾಂತರವೇ ಮಾನವನು ಭಗವದನುಗ್ರಹ ಸಂಪಾದನೆ ಮಾಡಬೇಕೆಂದು ಹರಿಯಾಜ್ಞೆಯಿದೆ. ದೇವತಾಪ್ರತಿಷ್ಠಾವಿಧಿವಿಧಾನವನ್ನು 'ತಂತ್ರಸಾರಸಂಗ್ರಹ' ಎಂಬ ಗ್ರಂಥದಲ್ಲಿ ಶ್ರೀಮದಾಚಾರ್ಯರು ನಿರೂಪಿಸಿದ್ದಾರೆ. ತಂತ್ರವನ್ನು ನಿರೂಪಿಸುವ ಗ್ರಂಥಗಳು ಹಲವಾರಿವೆ.

**ತಂತ್ರಮಾರ್ಗಸ್ತು ಹರಿಣಾ ಹ್ಯಸಂಖ್ಯಾ ಕೀರ್ತಿತಾ ಅಪಿ ।**
**ತೇಷ್ವಯಂ ಸುಗಮೋ ಮಾರ್ಗಃ ಸಫಲಶ್ಚಾನುಶ್ಚಾನುತಿಷ್ಠತಾಮ್ ॥**

ಎಂಬಂತೆ ಬ್ರಹ್ಮದೇವರಿಗೆ ಭಗವದುಕ್ತವಾದ ಈ ತಂತ್ರಸಾರವು ಸುಗಮ ಮಾರ್ಗವು. ವೈಷ್ಣವಮತವು ತಾರತಮ್ಯದಿಂದ ಕೂಡಿದ್ದಾಗಿದೆ.

**ಯಸ್ತಾರತಮ್ಯವೇತ್ತಾ ಸ್ಯಾತ್ ಗುರೂಣಾಂ ದೇವತಾಸ್ವಪಿ ।**
**ಭಕ್ತಿಮಾನ್ ಗುರುದೇವೇಷು ತದ್ ಭಕ್ತೇಷು ಚ ಸಿಧ್ಯತಿ ॥**

ಆದ್ದರಿಂದ ದೇವತೆಗಳಲ್ಲಿ ಗುರುಗಳಲ್ಲಿ ಸರಿಯಾದ ತಾರತಮ್ಯ ಜ್ಞಾನವನ್ನು ತಿಳಿದು ಯಾರು ಪೂಜಿಸುತ್ತಾನೋ ಅವನು ಮಾಡಿದ ಶುಭಕರ್ಮಗಳು ಬೇಗನೆ ಸಿದ್ಧಿಸುವವು.

ತಂತ್ರಸಾರಸಂಗ್ರಹದಲ್ಲಿ ಮೊದಲನೆಯ ಅಧ್ಯಾಯದಲ್ಲಿ ಅಷ್ಟಮಹಾಮಂತ್ರಗಳು ಭಗವಂತನ ಪೂಜಾವಿಧಾನವನ್ನು; ಎರಡನೇ ಅಧ್ಯಾಯದಲ್ಲಿ ತತ್ತ್ವನ್ಯಾಸಗಳು ಹೋಮವಿಧಾನವನ್ನು; ಮೂರನೇ ಅಧ್ಯಾಯದಲ್ಲಿ ಪ್ರತಿಮಾಲಕ್ಷಣ, ಅದರ ನಿರ್ಮಾಣಕ್ರಮ, ದೇವಾಲಯನಿರ್ಮಾಣ ಹಾಗೂ ಪ್ರತಿಷ್ಠಾ ಬ್ರಹ್ಮಕಲಶ ವಿಧಾನಗಳನ್ನು; ನಾಲ್ಕನೇ ಅಧ್ಯಾಯದಲ್ಲಿ ವೈಷ್ಣವ ಹಾಗೂ ಇತರ ದೇವತಾ ಮಂತ್ರಗಳು, ಪ್ರಾಣಾಯಾಮ, ಧ್ಯಾನಾದಿ ವಿಚಾರಗಳನ್ನು ತಿಳಿಸಿದ್ದಾರೆ.

ಭಗವಂತನ ಬಿಂಬಪ್ರತಿಷ್ಠಾಪನಾ ವಿಧಿಗಳನ್ನು ತಿಳಿಸಿ ಕೊನೆಗೆ–

**ದುರ್ಗಾ ಶಿವ ಸ್ಕಂದ ಸೂರ್ಯ ವಿನಾಯಕ ಮುಖಾನಪಿ**
**ಸ್ಥಾಪಯೇದುಕ್ತಮಾರ್ಗೇಣ ತತ್ತನ್ಮಂತ್ರೈಃ ಸ್ಮರನ್ ಹರಿಮ್ ॥**

ವೈಷ್ಣವತಂತ್ರದಂತೆಯೇ ದುರ್ಗಾ, ಶಿವ, ಸ್ಕಂದಾದಿ ದೇವತೆಗಳ ಪ್ರತಿಮಾ–ಪ್ರತಿಷ್ಠಾಪನೆ ಮಾಡುವಾಗ ಭಗವಂತನನ್ನು ಸ್ಮರಿಸುತ್ತ ಆಯಾ ಮಂತ್ರಗಳನ್ನು ಜಪಿಸಬೇಕು.

**ಗೋಲಕಂ ದ್ವಿತಯಂ ವಿಷ್ಣೋಃ ತೃತಯಂ ವಾ ಪ್ರಕೀರ್ತಿತಮ್ ।**
**ಅನ್ಯದೇವ ಪ್ರತಿಷ್ಠಾಸು ತದಂತಶ್ಚಿಂತಯೇದ್ಧರಿಮ್ ॥**

ದೇವರ ಪ್ರತಿಷ್ಠಾ ಪೂಜಾಕಾಲದಲ್ಲಿ ಪ್ರತಿಮೆಯಲ್ಲಿ ತೇಜೋಮಯನಾದ ಪ್ರಾಣದೇವರ ಚಿಂತನೆ, ಅವರ ಒಳಗೆ ತೇಜೋಮಯನಾದ ಭಗವಂತನ ಚಿಂತನೆ ಮಾಡಬೇಕು. ಇತರ ದೇವತೆಗಳ ಪ್ರತಿಷ್ಠಾ ಪೂಜಾಸಂದರ್ಭದಲ್ಲಿ ಪ್ರತಿಮೆಯ ಒಳಗೆ ಆ ದೇವತೆ, ಅವರ ಒಳಗೆ ಮುಖ್ಯಪ್ರಾಣ, ಅವರ ಒಳಗೆ ಭಗವಂತ ಎಂಬೀರೀತಿಯಲ್ಲಿ ಗೋಲಕತೃತಯಚಿಂತನೆ ಮಾಡಬೇಕು. ಪ್ರಕೃತ ಈ ಪರಶುರಾಮಕ್ಷೇತ್ರದ ಪರಿಸರದಲ್ಲಿ ನಾಗಾರಾಧನೆ ಪ್ರತಿಷ್ಠಾಬ್ರಹ್ಮಕಲಶಾದಿಗಳು ಬಹಳ ಪ್ರಚಲಿತವಾಗಿವೆ. ಅದನ್ನು ತಂತ್ರಸಾರೋಕ್ತ ರೀತಿಯಲ್ಲಿ ಮಾಡುವ ಉದ್ದೇಶದಿಂದ ಈ ನಾಗಪ್ರತಿಷ್ಠಾವಿಧಿಸಂಗ್ರಹ ಪುಸ್ತಕವನ್ನು ಹೊರತರಲಾಗಿದೆ. ಶೇಷದೇವರು ತಾರತಮ್ಯಕಕ್ಷೆಯಲ್ಲಿ ಏಳನೆಯವರು. ಗರುಡಶೇಷರುದ್ರರು ಸಮಾನರು. ರುದ್ರದೇವರು ಭಾವಿ ಶೇಷಪದವಿಯನ್ನು ಹೊಂದುವರು. ಅಹಂಕಾರತತ್ತ್ವಾಭಿಮಾನಿಗಳೂ ಆಗಿದ್ದಾರೆ. ವೇದಪ್ರತಿಪಾದ್ಯರು. ಪಂಚವೇದ ಎನಿಸಿದ ಪೌರುಷೇಯವಾದ ಮಹಾಭಾರತಾದಿ ಗ್ರಂಥಗಳಿಗೆ ಅಭಿಮಾನಿದೇವತೆಗಳಾಗಿದ್ದಾರೆ. ಮಹಾವೈರಾಗ್ಯ–ಶಾಲಿಗಳು, ವಿಷ್ಣುಭಕ್ತರೂ ಆಗಿದ್ದಾರೆ. ಎರಡು ಕೈಗಳಲ್ಲಿ ನೇಗಿಲು, ಖಡ್ಗದಂತಿರುವ ಆಯುಧ ಧರಿಸಿ, ಇನ್ನೆರಡು ಕೈಗಳಿಂದ ಬದ್ಧಾಂಜಲಿ ಉಳ್ಳವರಾಗಿ ದೇವರನ್ನು ನಿತ್ಯ ಸೇವಿಸುವರು. ನೇಗಿಲಿನಿಂದ ಭೂಮಿಯನ್ನು ಚೆನ್ನಾಗಿ ಉತ್ತು ಬೀಜ

ಬಿತ್ತಿದರೆ ಒಳ್ಳೆಯ ಮೊಳಕೆ ಬರುವುದು. ಅದರಂತೆ ಶೇಷದೇವರ ಆರಾಧನೆಯಿಂದ ಸಂಸಾರ ಎಂಬ ಭೂಮಿಯನ್ನು ತನ್ನ ನೇಗಿಲಿನಿಂದ ಉತ್ತು ಭಕ್ತರಿಗೆ ಮೋಕ್ಷಕ್ಕೆ ಬೇಕಾದ ಸಾಧನಗಳನ್ನು ಮಾಡಿಸಿ ನಮ್ಮನ್ನು ಉದ್ಧಾರ ಮಾಡುತ್ತಾರೆ. ಐಹಿಕವಾದ ಆರೋಗ್ಯ, ಸಂತತಿ, ಸಕಲಸಂಪತ್ತನ್ನೂ ಕರುಣಿಸುವರು. ನಾಗ ಅನಂತಾದಿ ಶಬ್ದವಾಚ್ಯರಾದ ಶೇಷದೇವರ ಪ್ರತಿಷ್ಠಾ ಪೂಜಾರಾಧನೆಗಳಿಂದ ಉದ್ಧಾರವಾಗಲು ಪ್ರಯತ್ನಿಸೋಣ.

ಮಧ್ವಾಚಾರ್ಯರು ಹೇಳಿದ ಸಂದೇಶದಂತೆ ತಾರತಮ್ಯಜ್ಞಾನವನ್ನು ತಿಳಿದು ಭಗವದರ್ಪಿತವಾದ ತೀರ್ಥ ನಿರ್ಮಾಲ್ಯ ನೈವೇದ್ಯಾದಿಗಳನ್ನು ಸಮರ್ಪಿಸುವ ಮೂಲಕ ನಾಗದೇವರ ಪೂಜೆಗಳನ್ನು ಮಾಡುವರೇ ಪೂರ್ಣಫಲವನ್ನು ಹೊಂದಲು ಸಾಧ್ಯವಾದೀತು.

'ತಂತ್ರಸಾರೋಕ್ತಪ್ರತಿಷ್ಠಾವಿಧಿ' ಎಂಬ ಪುಸ್ತಕವು ನಮ್ಮ ಗುರುಗಳ ಸಂಸ್ಥೆಯಾದ 'ಪೂರ್ಣಪ್ರಜ್ಞ ವಿದ್ಯಾಪೀಠ'ದಿಂದ ಹೊರಬಂದಿದೆ. ಆದರೂ ಸಂಕ್ಷೇಪವಾಗಿ ಹಾಗೂ ನಾಡಭಾಷೆಯಲ್ಲಿ ಬಂದರೆ ಸಾಮಾನ್ಯ ಪುರೋಹಿತರಿಗೂ ಇದು ಅನುಕೂಲವಾದೀತು ಎಂಬ ದೃಷ್ಟಿಯಿಂದ ಕನ್ನಡ ಮುದ್ರಣ ಮಾಡಿಸಿದ್ದೇವೆ. ಈ ಪುಸ್ತಕ ಹೊರತರಲು ಹಲವು ವರ್ಷಗಳಿಂದ ಬಹಳ ಮಂದಿ ಪಂಡಿತರು ಹಾಗೂ ಪುರೋಹಿತರು ಸೂಚನೆ ಮಾಡಿದ್ದರು. ಆದರೂ ಧೈರ್ಯ ಸಾಲಲಿಲ್ಲ. ಈವಾಗ ನಮ್ಮ ವಿದ್ಯಾಗುರುಗಳಾದ ಪೇಜಾವರ ಹಿರಿಯ ಶ್ರೀಪಾದರು ನಮ್ಮಿಂದ ಹಲವು ಬಾರಿ ಪ್ರತಿಷ್ಠಾ ಬ್ರಹ್ಮಕಲಶಾದಿಗಳನ್ನು ಮಾಡಿಸಿದ್ದಾರೆ. ಈ ಅನುಭವದಿಂದ ಹರಿವಾಯುಗಳ ಅನುಗ್ರಹದಿಂದ ಈ ಪುಸ್ತಕವು ಹೊರಬಂದಿದೆ.

ಈ ಪುಸ್ತಕದಲ್ಲಿ ನಾಗಪ್ರತಿಷ್ಠಾವಿಧಿ, ಜೀರ್ಣೋದ್ಧಾರವಿಧಿ, ಆಶ್ಲೇಷಾಬಲಿ, , ಸರ್ಪಸಂಸ್ಕಾರ ಹಾಗೂ ಪರಿಶಿಷ್ಟ ಭಾಗದಲ್ಲಿ ಪ್ರತಿಷ್ಠೆಗೆ ಅನುಕೂಲವಾದ ಕೌತುಕಬಂಧನ, ಮಂಟಪಸಂಸ್ಕಾರ, ಅಂಕುರಾರ್ಪಣ, ಅಪೂರ್ವ ಸಂಗ್ರಹವಾದ ನಾಗಸಹಸ್ರನಾಮಾವಳಿ ಮೊದಲಾದವುಗಳನ್ನು ಸಂಗ್ರಹಿಸಲಾಗಿದೆ.

ನನಗೆ ಅಸನವಸನಾದಿ ವೇದಾಂತವಿದ್ಯೆಗಳನ್ನು ಬೋಧಿಸಿ ಗುರುಗಳ ನಾಲ್ಕನೇ ಹಾಗೂ ಈಗ ನಡೆಯುವ ಐದನೇ ಪರ್ಯಾಯಾವಧಿಯಲ್ಲಿ ಮುಖ್ಯಪ್ರಾಣದೇವರ ಪ್ರಧಾನ ಅರ್ಚಕ ಹುದ್ದೆಯನ್ನು ನೀಡಿ ಅನುಗ್ರಹಿಸಿ, ಈ ಪುಸ್ತಕಕ್ಕೆ ಅನುಗ್ರಹಸಂದೇಶವನ್ನು ನೀಡಿ ಹರಸಿದ ಪೇಜಾವರಮಠ ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ಭಕ್ತಿಪೂರ್ವಕ ಅನಂತಾನಂತ ಸಾಷ್ಟಾಂಗ ಪ್ರಣಾಮಗಳು ಹಾಗೂ ವೇದವಿದ್ಯೆಯನ್ನು ಬೋಧಿಸಿದ ಹಾಗೂ ಅನುಗ್ರಹಸಂದೇಶವನ್ನು ನೀಡಿದ

ಪೇಜಾವರಮಠ ಕಿರಿಯ ಶ್ರೀಪಾದರಾದ ಶ್ರೀಶ್ರೀ ವಿಶ್ವಪ್ರಸನ್ನತೀರ್ಥಶ್ರೀಪಾದರಿಗೂ ಭಕ್ತಿಪೂರ್ವಕ ಪ್ರಣಾಮಗಳು.

ತಂತ್ರಸಾರಪ್ರತಿಷ್ಠಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆ ಹಾಗೂ ಅದರ ಗುಣದೋಷಗಳನ್ನು ಬೋಧನೆಮಾಡಿ ಆಶೀರ್ವದಿಸಿದ ವಿದ್ವಾನ್ ಚಿತ್ರಾಪುರ ಗೋಪಾಲಕೃಷ್ಣ ಆಚಾರ್ಯರಿಗೂ ಪ್ರಣಾಮಗಳು.

ನನಗೆ ಈ ಪುಸ್ತಕವನ್ನು ಮಾಡುವಂತೆ ಹೇಳಿ, ಪುಸ್ತಕವನ್ನು ತಯಾರಿಸಿ, ಅದರ ತಿದ್ದುಪಡಿಯನ್ನು ಮಾಡಿಸಿದ ನನ್ನ ಶಿಷ್ಯನಾದ ವಿದ್ವಾನ್ ಶ್ರೀಕಾಂತ ಬಾಳ್ತಿಲ್ಲಾಯ ಇವರಿಗೂ ಭಗವದನುಗ್ರಹರೂಪವಾದ ಆಶೀರ್ವಾದಗಳು.

ಈ ಪುಸ್ತಕವನ್ನು ತಯಾರಿಸುವಲ್ಲಿ ತಂತ್ರಸಾರಸಂಗ್ರಹ ಗ್ರಂಥ, ಯೋಗದೀಪಿಕಾ, ದಿ। ವಿದ್ವಾನ್ ಕಾಪು ಹಯಗ್ರೀವಾಚಾರ್ಯರ ಸಂಗ್ರಹ, ವಿದ್ವಾನ್ ಕಲ್ಯ ಗೋಪಾಲಾಚಾರ್ಯರ 'ನಾಗದೇವರ ಚರಿತ್ರೆ' ಪುಸ್ತಕದಿಂದಲೂ, ಕುಂಭಾಶಿ ಶ್ರೀಪತಿ ಉಪಾಧ್ಯಾಯರ 'ಸರ್ಪಕಲ್ಪ' ಹಾಗೂ ಎಡಪದವು ರಾಮಮೂರ್ತಿ ತಂತ್ರಿಗಳ ಸಂಗ್ರಹ ಪುಸ್ತಕದಿಂದ, ವಿದ್ವಾನ್ ರಮಾನಾಥಾಚಾರ್ಯರ 'ಆಶ್ಲೇಷಾಬಲಿ' ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯಪ್ರಕಾಶಿತ 'ನಾಗಪಂಚಮೀವ್ರತಕಲ್ಪೋಕ್ತ ಪೂಜಾವಿಧಿಃ' ಮೊದಲಾದ ಗ್ರಂಥಗಳು ಸಹಾಯಕವಾಗಿವೆ. ಈ ಎಲ್ಲಾ ಗ್ರಂಥಕರ್ತೃಗಳಿಗೂ ಹೃತ್ಪೂರ್ವಕ ಅಭಿನಂದನೆಗಳು.

ನಾವು ಎಷ್ಟು ಗ್ರಂಥ ಸಂಗ್ರಹಿಸಿದರೂ ಅದರ ಪ್ರಕಾಶನ ಸುಲಭಸಾಧ್ಯವಲ್ಲ. ನಮಗೆ ಸ್ವಲ್ಪವೂ ಭಾರ ಬೀಳದಂತೆ ಸುಲಭವಾಗಿ ಕೆಲವೇ ದಿನಗಳಲ್ಲಿ ಪ್ರಕಾಶನದ ಜವಾಬ್ದಾರಿಯನ್ನು ಹೊತ್ತಂತಹ ಹರಿವಾಯು ಪ್ರಕಾಶನ ಸಂಸ್ಥೆಯ ಸಂಸ್ಥಾಪಕರಾದ ಡಾ। ವಿದ್ವಾನ್ ಬೆ. ನಾ. ವಿಜಯೀಂದ್ರಾಚಾರ್ಯ, ಮೈಸೂರು ಇವರಿಗೆ ಹೃತ್ಪೂರ್ವಕ ಅನಂತಾನಂತ ಪ್ರಣಾಮಗಳು.

ಅಕ್ಷರಜೋಡಣೆ ಕಾರ್ಯದಲ್ಲಿ ಕೇವಲ ೧೦ ದಿನಗಳಲ್ಲಿ ಹಗಲು ರಾತ್ರಿ ಎನ್ನದೆ ಸಹಕರಿಸಿದ ಶ್ರೀಯುತ ಪದ್ಮನಾಭ ಕೇಕುಣ್ಣಾಯರ ಧರ್ಮಪತ್ನಿ ಶ್ರೀಮತಿ ಸ್ವರ್ಣಲತಾ ಕೇಕುಣ್ಣಾಯ ಅವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

* * *

ಸಂಕಲ್ಪದಲ್ಲಿ ದೇವತಾನಾಮವನ್ನು ವ್ಯತ್ಯಾಸ ಮಾಡಿಕೊಂಡು ಇತರ ಉದ್ದಿಷ್ಟ ದೇವತಾ ಪ್ರತಿಷ್ಠೆಗಳನ್ನೂ ಇದೇ ವಿಧಾನದಲ್ಲಿ ಮಾಡುವ ಉದ್ದೇಶದಿಂದ ಈ ಗ್ರಂಥವನ್ನು ಸಿದ್ಧಪಡಿಸಲಾಗಿದೆ.

# ವಿಷಯಾನುಕ್ರಮಣಿಕಾ


೧. ಪೀಠಿಕೆ ........ 1

೨. ಶಿಲ್ಪಿಪೂಜಾ ........ 19

೩. ಸಪ್ತಶುದ್ಧಿ ........ 21

೪. ದೇಹಶುದ್ಧಿಃ ........ 26

೫. ರಕ್ಷೋಘ್ನಹೋಮಃ ........ 37

೬ ವಾಸ್ತುಪೂಜಾವಿಧಿಃ ........ 43

೭ ಸಪ್ತಾಧಿವಾಸಾಃ ........ 53

೮. ಬಿಂಬಪ್ರತಿಷ್ಠಾಪನ ವಿಧಿಃ ........ 68

೯. ಚಕ್ರಾಬ್ಜಮಂಡಲಪೂಜಾ ........ 75

೧೦. ಬ್ರಹ್ಮಕಲಶಾಧಿವಾಸಃ ........ 83

೧೧. ಜೀರ್ಣೋದ್ಧಾರಃ ........ 94

೧೨. ನಾಗ ಕಲ್ಪೋಕ್ತಪೂಜಾ ........ 96

೧೩. ಆಶ್ಲೇಷಾಬಲಿವಿಧಾನಂ ........ 108

೧೪. ಸಪ್ತಸಂಸ್ಕಾರವಿಧಿಃ ........ 128

**ಪರಿಶಿಷ್ಟ**

೧. ಕೌತುಕಬಂಧನಮ್ ........ 135

೨. ಅಂಕುರಸ್ಥಾಪನಮ್ ........ 138

೩. ಮಂಟಪಸಂಸ್ಕಾರಃ ........ 143

೪. ಶಯ್ಯಾಧಿವಾಸೇ ಷೋಡಶನ್ಯಾಸಾಃ ........ 146

೫. ನಾಗ ಸಹಸ್ರನಾಮಾವಲಿಃ ........ 158


* * *

**ಶ್ರೀಶ್ರೀ ವಿಶ್ವೇಶತೀರ್ಥಶ್ರೀಪಾದರು**
**ಶ್ರೀಮಜ್ಜಗದ್ಗುರು ಶ್ರೀಮನ್ಮಧ್ವಾಚಾರ್ಯ**
**ಮೂಲಮಹಾಸಂಸ್ಥಾನ, ಪೇಜಾವರ ಅಧೋಕ್ಷಜಮಠ**
**ಉಡುಪಿ**



# ಅನುಗ್ರಹಸಂದೇಶ

**'ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ'** ನಿತ್ಯವೂ ಬದುಕಿನಲ್ಲಿ ಸತ್ಕರ್ಮಗಳನ್ನು ಮಾಡುತ್ತಾ ಬದುಕನ್ನು ಸಾರ್ಥಕಗೊಳಿಸಿಕೊಳ್ಳಬೇಕು. ಸತ್ಕರ್ಮಾನುಷ್ಠಾನಕ್ಕೆ ಭಗವದನುಸಂಧಾನಕ್ಕೆ ಉತ್ತಮ ಅಧಿಷ್ಠಾನವು ಆವಶ್ಯಕ. ದಾರುಪ್ರತಿಮಾ, ಶಿಲಾಪ್ರತೀಕ, ಜಲ ಇವುಗಳೆಲ್ಲವೂ ಉತ್ತಮ ಅಧಿಷ್ಠಾನಗಳೇ ಆಗಿವೆ. ಇವುಗಳಂತೆ ತತ್ತ್ವಾಭಿಮಾನಿದೇವತೆಗಳೂ ಉತ್ತಮ ಅಧಿಷ್ಠಾನಗಳೇ ಎನಿಸಿದ್ದಾರೆ. ಇಂತಹ ಉತ್ತಮ ಅಧಿಷ್ಠಾನದೇವತೆಗಳಲ್ಲಿ ವಾಯುಪ್ರತೀಕದಂತೆ ಶೇಷದೇವರ ಅಧಿಷ್ಠಾನವೂ ಮುಖ್ಯವಾಗಿದೆ. ಸಮಸ್ತಜೀವರಿಗೆ ಶೇಷದೇವರು ನಿಯಾಮಕರಾಗಿದ್ದಾರೆ. ಕುಂಡಲಿನೀ ಎನ್ನುವುದು ದೇಹದಲ್ಲಿರುವ ಸಂಕರ್ಷಣ ಶಕ್ತಿ ಎನಿಸಿದೆ. ಮನುಷ್ಯರ ದೇಹಕ್ಕೆ ಸಂಸ್ಕಾರಗಳನ್ನು ನಡೆಸುವಂತೆ ಭಗವಂತನಿಗೆ ಅಧಿಷ್ಠಾನಗಳಾದ ದೇವತಾಪ್ರತೀಕಗಳಿಗೂ ಸಂಸ್ಕಾರವು ಅತ್ಯಾವಶ್ಯಕವಾಗಿದೆ. ಪ್ರತಿಮೆಯಲ್ಲಿ ಸನ್ನಿಧಾನವು ತುಂಬಲು ಸಂಸ್ಕಾರಗಳನ್ನು ಹೇಗೆ ಮಾಡಬೇಕೆಂದು ಶ್ರೀಮದಾಚಾರ್ಯರು ಮಾರ್ಗದರ್ಶನ ಮಾಡಿದ್ದಾರೆ. ತಂತ್ರಸಾರದಲ್ಲಿ ಹೇಳಿದ ಆಚಾರ್ಯರ ಕ್ರಮವನ್ನು ಅನುಸರಿಸಿ ಭಗವದನುಸಂಧಾನಕ್ಕೆ ಯೋಗ್ಯವಾದ ದೇವತಾಪ್ರತಿಷ್ಠಾವಿಧಿಗಳನ್ನು ನಮ್ಮ ಪ್ರಿಯ ಶಿಷ್ಯರಾದ ಶ್ರೀ ವಿದ್ವಾನ್ ನಂದಳಿಕೆ ವಿಟ್ಠಲಾಚಾರ್ಯರು ಸುಂದರವಾಗಿ ಸಂಗ್ರಹಿಸಿದ್ದಾರೆ. ಸರಿಯಾದ ವಿಧಿಯನ್ನು ಅನುಸರಿಸಿ ಪ್ರತಿಷ್ಠೆಗಳನ್ನು ನಡೆಸಲೆಂದು ಈ ಗ್ರಂಥಕುಸುಮವನ್ನು ಸಮಾಜಕ್ಕೆ ಅರ್ಪಿಸುತ್ತಿದ್ದಾರೆ. ಈ ಉತ್ಸಾಹಿ ವಿದ್ವಾಂಸರಿಂದ ಮತ್ತಷ್ಟು ಸತ್ಕರ್ಮಗಳು ನಡೆಯಲೆಂದು ಶ್ರೀಕೃಷ್ಣಮುಖ್ಯಪ್ರಾಣದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.



**ಶ್ರೀಶ್ರೀ ವಿಶ್ವಪ್ರಸನ್ನತೀರ್ಥರು**
**ಶ್ರೀಮಜ್ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ**
**ಪೇಜಾವರ ಅಧೋಕ್ಷಜಮಠ, ಉಡುಪಿ**

# ಅನುಗ್ರಹಸಂದೇಶ

ಆಸ್ತಿಕರೆನಿಸಿಕೊಂಡ ನಾವೆಲ್ಲ ಬದುಕಿನಲ್ಲಿ ಯಶಸ್ಸು ಪಡೆಯಲೆಂದು ನಮ್ಮ ಪ್ರಯತ್ನದ ಜೊತೆಗೆ ದೇವತಾನುಗ್ರಹವನ್ನು ಬಯಸುತ್ತೇವೆ. ಅದಕ್ಕಾಗಿ ಪ್ರತಿಮಾ, ಅಗ್ನಿ, ಕಲಶ ಇತ್ಯಾದಿ ಮಾಧ್ಯಮಗಳನ್ನೂ ಬಳಸುತ್ತೇವೆ. ದೇವಾರಾಧನೆಯ ಎಲ್ಲ ಪ್ರಕ್ರಿಯೆಗಳೂ ಶಾಸ್ತ್ರೋಕ್ತ ಕ್ರಮದಲ್ಲಿ ನಡೆದಾಗಲಷ್ಟೇ ಫಲಪ್ರದ. ಅದಿಲ್ಲದಿದ್ದರೆ ಇವೆಲ್ಲ ಬರಿದೇ ದೊಂಬರಾಟಗಳಾಗುತ್ತವೆ; ಮಕ್ಕಳಾಡುವ ಬೊಂಬೆಯಾಟಗಳಾಗುತ್ತವೆ. ಅದಕ್ಕೋಸ್ಕರ ಶ್ರೀಕೃಷ್ಣ ಶ್ರೀಮದ್ಭಗವದ್ಗೀತೆಯಲ್ಲಿ ಅಂದದ್ದು: **'ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತೌ'** ಎಂದು.

**'ಧರ್ಮಸ್ಯ ಚರಣಂ ಶ್ರೇಯಃ, ಧರ್ಮಜ್ಞಾನಂ ತು ದುಷ್ಕರಮ್'** ಎಂಬ ಮಾತಿನಂತೆ ಶ್ರೇಯಸ್ಕರವಾದ ಧರ್ಮಾಚರಣೆಯ ಅರಿವಿರುವವರು ವಿರಳ. ಬಲ್ಲವರು ಸಮಾಜಕ್ಕೆ ಈ ನಿಟ್ಟಿನಲ್ಲಿ ಮಾರ್ಗದರ್ಶನ ಮಾಡಬೇಕು.

ಈ ನಿಟ್ಟಿನಲ್ಲಿ ನಮ್ಮ ಶಿಷ್ಯರಾದ ಶ್ರೀಯುತ ನಂದಳಿಕೆಯ ವಿದ್ವಾನ್ ಪಿಟ್ಠಲಾಚಾರ್ಯರು ತಂತ್ರಸಾರಾಗಮದ ಹಿನ್ನೆಲೆಯಲ್ಲಿ ರಚಿಸಿದ **'ದೇವತಾ-ಪ್ರತಿಷ್ಠಾವಿಧಿಸಂಗ್ರಹ'** ಪ್ರಯೋಗವು ಧಾರ್ಮಿಕ ಶ್ರದ್ಧಾಳುಗಳಿಗೆ ಅನುಕೂಲವಾಗಲಿದೆ. ಈ ಪುಸ್ತಕವನ್ನು ರಚಿಸಿದ ಪಿಟ್ಠಲಾಚಾರ್ಯರಿಗೂ ಉಪಯೋಗಿಸುವ ಸಕಲ ಧಾರ್ಮಿಕ ಶ್ರದ್ಧಾಳುಗಳಿಗೂ ಶ್ರೀಕೃಷ್ಣಮುಖ್ಯಪ್ರಾಣರ ಅನುಗ್ರಹವನ್ನು ಪ್ರಾರ್ಥಿಸುತ್ತೇವೆ.

ಇಂತು ಸಪ್ರೇಮ ನಾರಾಯಣಸ್ಮರಣೆಗಳು.

# ಪೀಠಿಕೆ

(ಸಂಗ್ರಹ : ವಿದ್ವಾನ್ ಕಲ್ಯ ಗೋಪಾಲ ಆಚಾರ್ಯ)

ಪರಮಪವಿತ್ರವಾದ ಪರಶುರಾಮಸೃಷ್ಟಿಯಲ್ಲಿ ಬಹುಭಾಗ ಆಸ್ತಿಕ ಜನರು ವಿಶೇಷವಾಗಿ ನಾಗಾರಾಧಕರಾಗಿದ್ದಾರೆ. ಇಡೀ ಭಾರತದೇಶದಲ್ಲಿ ನಾಗಾರಾಧನೆಯು ಅನೇಕ ರೂಪಗಳಿಂದ ಪ್ರಚಲಿತವಾಗಿದೆ. ಪ್ರಪಂಚದಲ್ಲೆಲ್ಲಾ ನಾಗಾರಾಧನೆ ಪ್ರಚಲಿತ ವಿತ್ತೆಂದೂ ಈಗಲೂ ನಾನಾ ರೂಪಗಳಲ್ಲಿ ಮುಂದುವರಿಯುತ್ತಲಿದೆ ಎಂದೂ ಚರಿತ್ರೆಯ ತಜ್ಞರು ಹೇಳುತ್ತಾರೆ.

ಸಾಮಾನ್ಯವಾಗಿ ನಾಗಾರಾಧನೆ ಎಲ್ಲಾ ಕಡೆ ಪ್ರಚಲಿತವಿದ್ದರೂ ಪರಶುರಾಮ ಸೃಷ್ಟಿಯಲ್ಲಿ ಅದರ ಆರಾಧನೆಯ ಸ್ವರೂಪ, ಜನರಿಗೆ ನಾಗನಲ್ಲಿರುವ ಅತೀವ ಆದರದ ಭಾವನೆ, ಕೆಲವು ಕಾಯಿಲೆಗಳಿಗೆ, ಸಂತಾನಪ್ರತಿಬಂಧ ಇತ್ಯಾದಿಗಳಿಗೆ ನಾಗನೇ ಕಾರಣವೆಂಬ ನಂಬಿಕೆ. ಅಲ್ಲಲ್ಲಿ ನಾಗಬೀದಿಗಳ ಕಲ್ಪನೆ, ಅಲ್ಲೆಲ್ಲ ಯಾವ ನಿರ್ಮಾಣಕಾರ್ಯವೂ ಆಗಬಾರದೆಂಬ ಆಗ್ರಹ, ಮೃತಸರ್ಪವನ್ನು ನೋಡಿದರೆ ಸಂಸ್ಕಾರ ಮಾಡಬೇಕೆಂಬ ಕಡ್ಡಾಯ, ವಿಶಿಷ್ಟವಾದ ಜಾನಪದ ಕಲಾಪ್ರಕಾರಗಳನ್ನೂ ಶಾಸ್ತ್ರೀಯವಾದ ಹೋಮಹವನಾದಿಗಳನ್ನೂ ಒಳಗೊಂಡಿರುವ ನಾಗಮಂಡಲಾದಿ ಧಾರ್ಮಿಕ ಕಾರ್ಯಗಳು, ದೇವರನ್ನೇ ಮೈಯಲ್ಲಿ ಆಹ್ವಾನಿಸಿ (ದರ್ಶನಸೇವೆ) ದೇವರಿಂದಲೆ ಕಷ್ಟಕಾಲಗಳಲ್ಲಿ ಮಾರ್ಗದರ್ಶನವನ್ನೂ ಅಭಯದ ನುಡಿಯನ್ನೂ ಕೇಳುವ ತವಕ, ಹುತ್ತಗಳ ಬಗ್ಗೆ ವಿಶೇಷವಾಗಿ ಭಯಭಕ್ತಿಯ ಭಾವನೆ, ನಾಗಬನದಲ್ಲಿರುವ ವೃಕ್ಷಸಂಕುಲದ ಅಭಿವೃದ್ಧಿಯ ಬಗ್ಗೆ ಕಳಕಳಿ –ಈ ರೀತಿಯ ನಂಬಿಕೆಗಳು; ಇದಕ್ಕೆ ಸಂಬಂಧಿಸಿದಂತೆ ಇರುವ ಆಚಾರವಿಚಾರಗಳು ವಿವಿಧ ರೀತಿಯಲ್ಲಿ ಅನಾದಿಕಾಲದಿಂದಲೇ ಜನರಿಗೆ ರಕ್ತಗತವಾಗಿ ಹರಿದುಬಂದಿರುವಂತೆ ಕಾಣುತ್ತದೆ. ಸಾಮಾನ್ಯವಾಗಿ ಇಲ್ಲಿಯ ದೈವದೇವರುಗಳ ಬಗ್ಗೆ ಸ್ವಲ್ಪಮಟ್ಟಿಗೆ ಅನಾದರ ವನ್ನು ತೋರಿಸುತ್ತಿರುವ ಅನ್ಯಮತೀಯರು ಸಹ ನಾಗನ ಬಗ್ಗೆ ತಕ್ಕಮಟ್ಟಿಗೆ ಗೌರವಾದರಗಳನ್ನು ಹೊಂದಿರುತ್ತಾರೆ. ಕೇರಳ, ತುಳುನಾಡು, ಉತ್ತರಕನ್ನಡ – ಈ ೩ ಪ್ರದೇಶಗಳನ್ನು ವ್ಯಾಪಿಸಿರುವ ಭೂಭಾಗವೇ ಪರಶುರಾಮಸೃಷ್ಟಿ. ಇದರ ಕಿಂವದಂತಿರೂಪದ ಕಥೆ ಹೀಗಿದೆ (ಸ್ಕಾಂದಪುರಾಣದ ಸಹ್ಯಾದ್ರಿಖಂಡದಲ್ಲಿ ಇದಕ್ಕೆ ಆಧಾರವಿದೆ).

ಕಾರ್ತವೀರ್ಯ ಕ್ಷತ್ರಿಯ ರಾಜನಿಂದ ಹತನಾದ ತನ್ನ ತಂದೆ ಜಮದಗ್ನಿಋಷಿ ಗಳನ್ನು ನೋಡಿ ಅತಿದುಃಖಿತಳಾಗಿ ೨೧ ಸಲ ತನ್ನ ಎದೆಯನ್ನು ಬಡಿದುಕೊಂಡ

ತಾಯಿಯನ್ನು ನೋಡಿ ದೇಶದಾದ್ಯಂತ ೨೧ ಸಲ ತಿರುಗಿ ತಿರುಗಿ ಯುದ್ಧಮಾಡಿ ದುಷ್ಟಕ್ಷತ್ರಿಯ ಸಂಹಾರ ಮಾಡುತ್ತೇನೆಂದು ಭೀಷಣ ಪ್ರತಿಜ್ಞೆಯನ್ನು ಮಾಡಿದ ಭಗವಾನ್ ಪರಶುರಾಮದೇವರು ಮಹಾಮಹಿಮೆಯಿರುವ ತನ್ನ ಕೊಡಲಿಯನ್ನು ತೆಗೆದುಕೊಂಡು ಕಾರ್ತವೀರ್ಯನ ಮಕ್ಕಳನ್ನು ಸಂಹಾರವಮಾಡಿ ಅವರ ಸಾಮಂತರಂತಿರುವ ಸಮಸ್ತ ರಾಜಕುಲವನ್ನೂ ೨೧ ಸಲ ದೇಶದಾದ್ಯಂತ ಸಂಚರಿಸಿ ಸಂಹಾರ ಮಾಡಿದರು. ಈ ಮೂಲಕ ದುಷ್ಟಕ್ಷತ್ರಿಯ-ಶಿಷ್ಟರಕ್ಷಣರೂಪವಾದ ಧರ್ಮವನ್ನು ಸಂಸ್ಥಾಪನೆ ಮಾಡಿದರು. ತಾನು ಜಯಿಸಿದ ಭೂಮಿಯೆಲ್ಲವನ್ನೂ ಕ್ಷತ್ರಿಯಸಂಹಾರದ ಪಾಪಪರಿಹಾರಾರ್ಥ ಅಶ್ವಮೇಧಯಾಗವನ್ನು ಮಾಡಿ, ಯಾಗ ಮಾಡಿಸಿದ ಕಶ್ಯಪ ಮಹರ್ಷಿಗೆ ದಾನಮಾಡಿ ತಾನು ತಪಸ್ಸಿಗೆ ತೆರಳಲು ನಿಶ್ಚಯಿಸಿದರು. ಕಶ್ಯಪ ಮಹರ್ಷಿಗಳು ಇಡೀ ಭೂಮಿಯನ್ನು ಪ್ರತಿಗ್ರಹ ಮಾಡಿದ್ದರಿಂದ ಭೂಮಿಗೆ 'ಕಾಶ್ಯಪೀ' ಎಂಬ ಹೆಸರು ಬಂತು (ಮಹಾಭಾರತ ಶಾಂತಿಪರ್ವ, ೪೮). ತಪಸ್ಸು ಮಾಡಲು ತನ್ನದೇ ಭೂಮಿ ಬೇಕೆಂಬ ಕಲ್ಪನೆಯು ಮೂಡಿಬಂದಾಗ ಸಮುದ್ರದ ಎದುರು ಬಂದು ಕೊಡಲಿಯನ್ನೆತ್ತಿದರು. ಪಾತಾಳ ಲೋಕದ ರಾಜನಾದ **ಅನಂತನು ಸಮುದ್ರರಾಜ** ವರುಣನೊಂದಿಗೆ ಪರಶುರಾಮದೇವರಿಗೆ ಶರಣಾಗಿ ನಿಮ್ಮ ಕೊಡಲಿಯು ಬೀಳುವ ಪ್ರದೇಶದವರೆಗಿನ ಜಾಗವನ್ನು ಕೊಡುತ್ತೇನೆಂದು ಹೇಳಲು ಕೊಡಲಿಯನ್ನು ಬೀಸಿದರು. ಕೊಡಲಿ ಬಿದ್ದಲ್ಲಿಯವರೆಗಿನ ಜಾಗದಿಂದ ಸಮುದ್ರವು ಹಿಂದೆ ಸರಿಯಿತು. ಇಲ್ಲಿ ತಾನು ಒಂದು ದೇಶವನ್ನು ಸ್ಥಾಪಿಸುವುದಾಗಿಯೂ ಈ ದೇಶದಲ್ಲಿ ಧರ್ಮಸಂಸ್ಥಾಪನೆ, ನ್ಯಾಯಪರಿಪಾಲನೆಗಾಗಿ ಹಾಗೂ ಇಲ್ಲಿ ವಾಸಿಸುವ ಜನರಲ್ಲಿ ಭಕ್ತಿಜ್ಞಾನವೃದ್ಧಿಗಾಗಿ ೨೪,೦೦೦ ದೇವೀ ಶಿವ ವಿಷ್ಣು ಆದಿ ದೇವಾಲಯಗಳನ್ನು ನಿರ್ಮಿಸುವುದಾಗಿಯೂ ಅದಕ್ಕೆ ಸಂಬಂಧಿಸಿದಂತೆ ನಾಗಾಲಯ ದೈವಾಲಯಗಳನ್ನು ಸೃಷ್ಟಿಸುವುದಾಗಿಯೂ ಪರಶುರಾಮದೇವರು ಅನಂತದೇವರಿಗೆ ವರವನ್ನು ಕೊಟ್ಟರು.

ಈ ರೀತಿ ಪರಶುರಾಮದೇವರ ಆದೇಶದಂತೆ ಪ್ರತಿ ಗ್ರಾಮದಲ್ಲಿಯೂ ದೇವಾಲಯ ನಾಗಾಲಯಗಳ ನಿರ್ಮಾಣವಾಯಿತೆಂದು ಪ್ರತೀತಿ ಇದೆ.

ಸರ್ಪ, ನಾಗ ಶಬ್ದಗಳನ್ನು ನಾವಿಲ್ಲಿ ಸಮಾನಾರ್ಥವಾಗಿ ಬಳಸುತ್ತೇವೆ. ಆದರೂ ಸೂಕ್ಷ್ಮವಾಗಿ ನೋಡುವಾಗ ಇವರಲ್ಲಿ ಭೇದವಿದ್ದ ಹಾಗೆ ಕಾಣುತ್ತದೆ. ನಾಗರು ಕಶ್ಯಪ-ಸುರಸೆಯರ ಮಕ್ಕಳೆಂದೂ ಸರ್ಪಗಣಗಳು ಕಶ್ಯಪ-ಕದ್ರೂ ದಂಪತಿಗಳ ಮಕ್ಕಳೆಂದೂ ಪುರಾಣಗಳಲ್ಲಿ ವರ್ಣನೆಯಿದೆ. ಆದ್ದರಿಂದಲೆ ಭಗವದ್ಗೀತೆಯಲ್ಲಿ **'ಅನಂತಶ್ಚಾಸ್ಮಿ ನಾಗಾನಾಂ ಸರ್ಪಾಣಾಮಸ್ಮಿ ವಾಸುಕೀ'** ಎಂಬ ಮಾತು ಬಂತು. 'ನಾಗರಲ್ಲಿ ಅನಂತನು ನಾನಾಗಿದ್ದೇನೆ; ಸರ್ಪಗಳಲ್ಲಿ ವಾಸುಕಿ

ನಾನಾಗಿದ್ದೇನೆ' ಎಂಬ ಮಾತಿನಿಂದಲೆ ನಾಗ-ಸರ್ಪಗಳಲ್ಲಿ ಭೇದವಿದೆ ಎಂದು ಅರ್ಥವಾಗುತ್ತದೆ. **'ನಾಗಃ ದೇವಯೋನಿವಿಶೇಷಃ'** ಎಂದು ನಿರುಕ್ತ ಕಾಣುತ್ತದೆ. ಭಗವಾನ್ ಶೇಷದೇವರ ಧ್ಯಾನದಲ್ಲಿ ಶ್ರೀಮನ್ಮಧ್ವಾಚಾರ್ಯರು,

**ದಧಾನೋ ಹಲಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।**
**ಸಹಸ್ರಮೂರ್ಧಾಽದ್ವಿತೀಯಕರ್ಣಭೂಷಃ ಪ್ರಿಯಾಯುತಃ ।**
**ವನಮಾಲೀ ಪೀತವಾಸಾಃ ಧ್ಯೇಯೋ ವಿಷ್ಣೋಽಸ್ತು ಪೃಷ್ಠತಃ ॥**

-ಎಂದು ವಿವರಿಸುತ್ತಾರೆ. "ಶೇಷದೇವರು ಗದೆಯನ್ನೂ ನೇಗಿಲನ್ನೂ ಧರಿಸಿದ್ದಾರೆ. ಶ್ವೇತವರ್ಣದವರಾಗಿದ್ದಾರೆ. ಶ್ರೀಮಹಾವಿಷ್ಣುವಿಗೆ ಭಕ್ತಿಯಿಂದ ಕೈಮುಗಿಯುತ್ತಿದ್ದಾರೆ. ಸಾವಿರ ಹೆಡೆಯುಳ್ಳವರಾಗಿದ್ದಾರೆ. ವಿಶಿಷ್ಟವಾದ ಮಕರಕುಂಡಲಗಳನ್ನು ಧರಿಸಿದ್ದಾರೆ. ಪತ್ನಿಯೊಂದಿಗಿದ್ದಾರೆ. ವನಮಾಲಿಯೂ ಪೀತಾಂಬರಧಾರಿಯೂ ಆಗಿ ಮಹಾವಿಷ್ಣುವಿನ ಹಿಂಬದಿಯಲ್ಲಿ ವಿರಾಜಮಾನರಾಗಿದ್ದಾರೆ". ಶ್ರೀವಾಸುಕಿಯ ಧ್ಯಾನದಲ್ಲಿಯೂ 'ಸುವರ್ಣಮಕುಟೋಲ್ಲಸತ್ ಕಟಕಕುಂಡಲಾ-ಲಂಕೃತಮ್' ಎಂದು ಹೇಳಿರುವುದರಿಂದ ಯಾರಿಗೆ ಕೇವಲ ಸರ್ಪಾಕಾರ, ಯಾರಿಗೆ ದೇವತಾಕಾರ (ಮನುಷ್ಯಾಕಾರ) ಎಂದು ನಿರ್ಣಯಿಸುವುದು ಕಷ್ಟದ ವಿಷಯವೆ. ಇವರ ತಂದೆ ಕಶ್ಯಪರೆಂಬುದು ನಿರ್ವಿವಾದ. ಪುರಾಣಗಳಲ್ಲಿ ಸುರಸೆ, ಕದ್ರೂ ಎಂದು ತಾಯಂದಿರ ಹೆಸರುಗಳು ಬೇರೆಬೇರೆ ಬಂದಿದ್ದರೂ ಸಾಮಾನ್ಯವಾಗಿ ಇವರೆಲ್ಲ ಕದ್ರುವಿನ ಮಕ್ಕಳೆಂದೇ ಪ್ರಸಿದ್ಧಿ.

ಕಶ್ಯಪಮಹರ್ಷಿಗೆ ಇಬ್ಬರು ಪತ್ನಿಯರು.

**ಕದ್ರೂಶ್ಚ ವೈ ಸುಪರ್ಣೀ ಚಾತ್ಮರೂಪಯೋರಸ್ಪರ್ಧೇತಾಂ ಸಾ ಕದ್ರೂಸ್ಸುಪರ್ಣೀ-ಮಜಯತ್ ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ ತೇನಾತ್ಮಾನಂ ನಿಷ್ಕ್ರೀಣೀಷ್ವೇತಿ ॥**

ಕದ್ರೂ ಸುಪರ್ಣಿಯರಲ್ಲಿ ಎಲ್ಲ ರೀತಿಯಲ್ಲಿಯೂ ಅನ್ಯೋನ್ಯ ಸ್ಪರ್ಧೆಯಿತ್ತು. ತಮ್ಮ ಸೌಂದರ್ಯವಿಷಯದಲ್ಲಿಯೂ ಸಹ. ಈ ಸ್ಪರ್ಧೆಯಲ್ಲಿ ಸುಪರ್ಣಿಯನ್ನು ಸವತಿಯಾದ ಕದ್ರೂಮಾತೆಯು ಗೆದ್ದಳು. ಇದರ ಬಗ್ಗೆ ಇನ್ನೊಂದು ರೀತಿಯ ರೋಚಕವಾದ ಕಥೆ ಇತಿಹಾಸದಲ್ಲಿ ಬರುತ್ತದೆ. ಇಲ್ಲಿ ಸುಪರ್ಣಿಗೆ ಬದಲು ವಿನತೆ ಬರುತ್ತಾಳೆ. ಅವಳೂ ಕದ್ರುವೂ ಗರ್ಭಿಣಿಯರಾಗುತ್ತಾರೆ.

ಕದ್ರೂದೇವಿಯು ಸಮಯಾನುಸಾರವಾಗಿ ನೂರು ಮೊಟ್ಟೆಗಳನ್ನಿಟ್ಟಳು. ವಿನತೆಯು ಎರಡು ಮೊಟ್ಟೆಗಳನ್ನಿಟ್ಟಳು. ಕದ್ರುವಿನ ಮೊಟ್ಟೆಗಳಿಂದ ಮರಿಗಳು

ಹೊರಬಂದು ಆಚೆ ಈಚೆ ಓಡಾಡಲು ಸುರುಮಾಡಿದವು. ವಿನತೆಯ ಮೊಟ್ಟೆಗಳಿಂದ ಯಾವ ಮರಿಯೂ ಬರಲಿಲ್ಲ. ವಿನತೆಗೆ ಬಹಳ ಕಸಿವಿಸಿಯಾಯಿತು.

ವಿನಯತೆಯು ಮೊಟ್ಟೆಯನ್ನು ಒಡೆದಳು. ಸಮಯವಾಗದ್ದರಿಂದ ಅದರಲ್ಲಿದ್ದ ಮಗುವಿನ ಕಾಲು ಬೆಳೆದಿರಲಿಲ್ಲ. ಹುಟ್ಟುಜ್ಞಾನಿಯಾದ ಅರುಣನು ಆ ಮೊಟ್ಟೆಯಿಂದ ಹೊರಬಂದ. ಅಕಾಲದಲ್ಲೆ ತಾನು ಹೊರಬರಬೇಕಾಗಿ ಬಂದದ್ದರಿಂದ ಅವನು ಸಿಟ್ಟುಗೊಂಡಿದ್ದನು.

ಲೋಕಭರಿತೆಯಾದ ನೀನು ಬೆಳವಣಿಗೆಗೆ ಮೊದಲೆ ನನ್ನನ್ನು ಮೊಟ್ಟೆಯಿಂದ ಹೊರಬರುವಂತೆ ಮಾಡಿ ಭವಿಷ್ಯದ ನನ್ನ ತೊಂದರೆಗಳಿಗೆ ಕಾರಣಳಾಗಿದ್ದಿ. ಆದ್ದರಿಂದ ನೀನು ನಿನ್ನ ತಂಗಿಗೆ ದಾಸಿಯಾಗೆಂದು ಶಾಪವನ್ನಿತ್ತನು.

ಇದೇ ಸಮಯದಲ್ಲಿ ಅಕ್ಕತಂಗಿಯರು ಒಟ್ಟಿಗಿದ್ದಾಗ ತಮ್ಮ ಬಳಿಯಿಂದಲೆ ಹಾದುಹೋದ ಉಚ್ಚೈಃಶ್ರವಸ್ಸೆಂಬ ಸ್ವರ್ಗಲೋಕದ ಕುದುರೆಯನ್ನು ಕಂಡರು.

ಈಗ ಇಲ್ಲಿಂದಲೆ ಹಾದುಹೋದ ಉಚ್ಚೈಃಶ್ರವಸ್ಸನ್ನು ನೋಡಿದಿಯಷ್ಟೆ. ಇದನ್ನು ಬಿಳಿಕುದುರೆ ಎಂದು ನಾನು ಹೇಳುತ್ತೇನೆ. ನೀನೂ ಅದರ ಬಣ್ಣವನ್ನು ಹೇಳು. ನಾವು ಅದರ ಬಗ್ಗೆ ಪಣ ಕಟ್ಟೋಣ –ಎಂದಳು ವಿನತೆ.

ಕದ್ರೂ ಹೇಳುತ್ತಾಳೆ: "ಈ ಕುದುರೆಯು ಕಪ್ಪು ರೋಮವುಳ್ಳದ್ದು ಎಂದು ನಾನು ಹೇಳುತ್ತೇನೆ. ಯಾರು ಸೋಲುತ್ತಾರೋ ಅವರು ಗೆದ್ದವರ ಚಾಕರಿ ಮಾಡಬೇಕೆಂಬ ಪಣ ಕಟ್ಟೋಣ". ಅನಂತರ ಅವರವರ ಮನೆಗೆ ಅವರು ತೆರಳಿದರು. ಕದ್ರೂವಿನ ಮಕ್ಕಳು ಹಲವು ಬಣ್ಣದವರಿದ್ದರು– ಅರಸಿನಬಣ್ಣದವರು, ಬಿಳಿಬಣ್ಣದವರು, ಕಪ್ಪುಬಣ್ಣದವರು.

ಮಕ್ಕಳನ್ನು ಕರೆದು ಕದ್ರೂ ಹೇಳಿದಳು: "ನಮ್ಮಲ್ಲಿ ಹೀಗೊಂದು ಪಣ ನಡೆದಿದೆ. ನಾನು ದಾಸಿಯಾಗಬಾರದೆಂದಿದ್ದರೆ ಬಿಳಿಕುದುರೆಯನ್ನು ಕಪ್ಪಾಗಿ ತೋರಿಸಬೇಕಾಗಿದೆ. ನೀವು ಎಲ್ಲರೂ ಸೇರಿ ಕುದುರೆಯನ್ನು ಸುತ್ತಿಕೊಂಡು ನಾವು ದೂರದಿಂದ ನೋಡುವಾಗ ಕುದುರೆ ಇಡೀ ಕಪ್ಪಾಗಿ ಕಾಣುವ ಹಾಗೆ ಮಾಡಬೇಕು" ಎಂದು ಅಪ್ಪಣೆ ಕೊಟ್ಟಳು.

ಕೆಲವರಿಗೆ ತಾಯಿಯ ಮಾತು ರುಚಿಸಲಿಲ್ಲ. ನೀನು ಹೀಗೆ ಮೋಸ ಮಾಡುವುದು ಸರಿಯಲ್ಲ. ಆದ್ದರಿಂದ ನಾವು ನಿನ್ನ ಮಾತನ್ನು ಕೇಳುವುದಿಲ್ಲವೆಂದು ಅವು ಪ್ರತ್ಯುತ್ತರ ಕೊಟ್ಟವು. ಇದರಿಂದ ಕುಪಿತಳಾದ ತಾಯಿಯು– "ಜನಮೇಜಯನ ಸರ್ಪಸತ್ರದಲ್ಲಿ ನಿಮ್ಮನ್ನು ಅಗ್ನಿಯು ದಹಿಸಲಿ" ಎಂದು ಶಾಪವನ್ನು ಕೊಟ್ಟಳು.

ಈ ತಾಯಿಯ ಶಾಪದಿಂದ ಉದ್ವೇಗಗೊಂಡ ಕರ್ಕೋಟಕನು– "ತಾಯೇ, ನೀನು ಹೆದರಬೇಡ. ನೀವಿಬ್ಬರೂ ಉಚ್ಚೈಃಶ್ರವಸ್ಸನ್ನು ನೋಡಲು ಬರುವಾಗ ನಾನು ಇಡೀ ಕುದುರೆಯ ದೇಹವನ್ನು ಸುತ್ತಿ ಕಪ್ಪಾಗಿ ಕಾಣುವಂತೆ ಮಾಡುತ್ತೇನೆ" ಎಂದು ಹೇಳಿದನು.

ಸವತಿಯರಿಬ್ಬರೂ ಅಲ್ಲಿ ಹೋಗಿ ನೋಡುವಾಗ ಕುದುರೆ ಕಪ್ಪಾಗಿತ್ತು. ಇದರ ಪರಿಣಾಮವಾಗಿ ವಿನತೆಯು ಕದ್ರೂವಿನ ದಾಸಿಯಾದಳು. ಬಹಳ ಸಮಯ ಕಳೆಯಿತು. ವಿನತೆಯ ಇನ್ನೊಂದು ಮೊಟ್ಟೆಯಿಂದ ಗರುಡನು ಹೊರಬಂದನು. ಹುಟ್ಟುವಾಗಲೇ ಮಹಾಪರಾಕ್ರಮಶಾಲಿಯೂ, ತೇಜಸ್ವಿಯೂ ಆದ. ತನ್ನ ತಾಯಿಯ ದುರವಸ್ಥೆಯನ್ನು ಕಂಡು ಕಾರಣವನ್ನು ತಿಳಿದು ತನ್ನ ತಾಯಿಯ ದಾಸೀತ್ವದ ವಿಮೋಚನೆಗೋಸ್ಕರ ಸರ್ಪಗಣಗಳಿಗೆ ಸ್ವರ್ಗಲೋಕದಿಂದ ಅಮೃತವನ್ನೇ ತಂದು ಕೊಟ್ಟು ತನ್ನ ತಾಯಿಯನ್ನು ದಾಸೀತ್ವದಿಂದ ವಿಮೋಚನೆಗೊಳಿಸುತ್ತಾನೆ.

ಕದ್ರೂವಿನ ಮಕ್ಕಳಲ್ಲಿ ಸಾತ್ವಿಕರು, ರಾಜಸರು, ತಾಮಸರು ಎಂಬ ೩ ತರದ ಸ್ವಭಾವವುಳ್ಳವರಿದ್ದಾರೆಂದು ಪುರಾಣಗಳು ವರ್ಣಿಸುತ್ತವೆ. ತಾಯಿಯ ಶಾಪದಿಂದ ನೊಂದ ಎಲ್ಲರಿಗೂ ಜ್ಯೇಷ್ಠನಾದ ಶೇಷನು ಬ್ರಹ್ಮದೇವರಲ್ಲಿಗೆ ಹೋಗಿ ತಾಯಿಯ ಶಾಪದ ವಿಚಾರ ಹೇಳಲು ಬ್ರಹ್ಮದೇವರು ಹೀಗೆಂದರು–

'ತಾಯಿಯ ಶಾಪದಿಂದ ನೀವೇನೂ ಗಾಬರಿಗೊಳಗಾಗಬೇಕಿಲ್ಲ. ಅದು ತಾಮಸ ನಾಗರಿಗೆ ಮಾತ್ರ ಹಾನಿಯನ್ನುಂಟುಮಾಡುತ್ತದೆ. ಅದು ನನ್ನ ಅಭಿಮತವೇ' ಎಂದು ನುಡಿದು, 'ವಾಸುಕಿಯ ತಂಗಿ ಜರತ್ಕಾರುವೆಂಬ ನಾಗಕನ್ನಿಕೆ ಇದ್ದಾಳೆ. ಅವಳನ್ನು ಜರತ್ಕಾರು ನಾಮದ ಮಹರ್ಷಿಗೆ ಮದುವೆ ಮಾಡಿ ಕೊಟ್ಟರೆ ಅವರಿಗೆ **ಆಸ್ತಿಕ** ಮಹರ್ಷಿಯು ಜನಿಸುತ್ತಾನೆ. ಅವನು ತಾಯಿಯ ಶಾಪವಿದ್ದರೂ ಸಹ ಇಡೀ ನಾಗಕುಲ ಸಂಹಾರವಾಗದಂತೆ ನೋಡಿಕೊಳ್ಳುತ್ತಾನೆ' ಎಂದು ಆಶ್ವಾಸನೆ ನೀಡಿದರು. ಆದರೂ ಸಹ ಸಾತ್ವಿಕನಾದ ಶೇಷನು ತಾಯಿಯ ಕೃತ್ಯದಿಂದ ನೊಂದವನಾಗಿ ವೈರಾಗ್ಯಶಾಲಿಯಾಗಿ ಶ್ರೀಮಹಾವಿಷ್ಣುವನ್ನು ಕುರಿತು ತಪಸ್ಸು ಮಾಡಿದನು.

ಈ ಶೇಷನೇ ಅನಂತನಾಗಿಯೂ ರೂಪವನ್ನು ಧರಿಸಿದನು. ಒಬ್ಬನು ವಿಷ್ಣುವಿಗೆ ಶಯನರೂಪಿಯಾದರೆ ಇನ್ನೊಬ್ಬನು ಭೂಧಾರಿಯಾಗಿ ಜಗತ್ತಿನ ಸಂರಕ್ಷಕನಾದನು. ಶೇಷ ಅನಂತರು ಸಾವಿರ ಸಾವಿರ ಹೆಡೆಯವರು. ಅವರೇ ಜ್ಯೇಷ್ಠರು. ಶೇಷನು ಮಹಾವಿಷ್ಣುವಿನ ಅನುಗ್ರಹದಿಂದ ಪ್ರತ್ಯೇಕ ಕರ್ತವ್ಯಗಳನ್ನು ವಹಿಸಿಕೊಂಡ ಮೇಲೆ ಸರ್ಪಗಣಗಳೆಲ್ಲ ಸೇರಿ ೮೦೦ ಹೆಡೆಯ ವಾಸುಕಿಯನ್ನು ನಾಗರಾಜನೆಂದು ಘೋಷಿಸಿದರು.

ಈ ರೀತಿ ಮೊದಲನೆಯದಾಗಿ ಜನಿಸಿದವನು ಶೇಷ; ಅನಂತರ ವಾಸುಕಿ ಇತ್ಯಾದಿ.

**ಶೇಷಃ ಪ್ರಥಮತೋ ಜಾತಃ ವಾಸುಕಿಸ್ತದನಂತರಮ್ ।**
**ಐರಾವತಸ್ತಕ್ಷಕಶ್ಚ ಕರ್ಕೋಟಕಧನಂಜಯೌ ॥**

ಈ ನಾಗವಂಶ ವೃದ್ಧಿಯಾಗಿ ಕೋಟಿಕೋಟಿಗಟ್ಟಲೆ ನಾಗಗಣಗಳ ಸಾಮ್ರಾಜ್ಯ ಪಾತಾಲಲೋಕದಲ್ಲಿ ಸ್ಥಾಪಿತವಾಯಿತು. ಈ ನಾಗಗಣಗಳೆಲ್ಲಾ ತಮ್ಮ ರಾಜನನ್ನಾಗಿ ವಾಸುಕಿಯನ್ನು ಆರಿಸಿಕೊಂಡರು. ಗರುಡನ ಭಯದಿಂದ ಪೀಡಿತನಾದ ವಾಸುಕಿಯು ಸುಬ್ರಹ್ಮಣ್ಯನನ್ನು ಆಶ್ರಯಿಸಿದನೆಂದು ನಾಗಪದ್ಯ ವಿವರಿಸುತ್ತದೆ.

ಗರುಡನ ಭಯ ನಿವಾರಿಸಿಕೊಂಡ ವಾಸುಕಿಯು ಜನನಿಯ ಶಾಪಕ್ಕೆ ಹೆದರಿ ಬ್ರಹ್ಮದೇವರ ಅಪ್ಪಣೆಯಂತೆ ಜರತ್ಕಾರು ಋಷಿಯ ಅನ್ವೇಷಣೆಗೆ ಹೊರಡುತ್ತಾನೆ.

ಜರತ್ಕಾರುವೆಂಬ ಋಷಿಯೊಬ್ಬನಿದ್ದ. ತಪಸ್ಸಿನಿಂದಾಗಿ ಜೀರ್ಣಗೊಂಡ ಶರೀರ ವುಳ್ಳವನು ಎಂದು ಈ ಶಬ್ದದ ಅರ್ಥ. ಈ ಋಷಿಯು ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತಾ ದೇವರ ಧ್ಯಾನದಲ್ಲೇ ಕಾಲಕಳೆಯುತ್ತಾ ವೃದ್ಧನಾದ. ಒಂದು ದಿವಸ ಕಾಡಿನಲ್ಲಿ ಸಂಚರಿಸುತ್ತಿರುವಾಗ ಹಲವಾರು ಋಷಿಗಳು ಜೀರ್ಣಶೀರ್ಣವಾಗಿ ನೇತಾಡಿಕೊಂಡಿರುವ ಒಂದು ಹಗ್ಗವನ್ನು ಹಿಡಿದುಕೊಂಡು ಭೂಮಿಗೆ ಬೀಳದ ಹಾಗೆ ಕಷ್ಟಪಡುತ್ತಿರುವುದನ್ನು ಕಂಡು ಕರುಣೆಯಿಂದ ಈ ರೀತಿ ಪ್ರಶ್ನಿಸಿದನು: "ಮಹರ್ಷಿಗಳೇ, ಯಾರು ನೀವು? ನಿಮ್ಮನ್ನು ನೋಡಿದರೆ ಮಹಾತಪಸ್ವಿಗಳಾಗಿ ಕಾಣುತ್ತೀರಿ. ನಿಮ್ಮ ಒದ್ದಾಟ ನೋಡಿದರೆ ಅಯ್ಯೋ ಪಾಪವೆನಿಸುತ್ತದೆ. ನನ್ನಿಂದ ನಿಮಗೇನಾದರೂ ಸಹಾಯ ಬೇಕೆ? ಎಂದನು. ಅವರೆಂದರು– "ನಮ್ಮ ಕಷ್ಟವನ್ನು ನಾವೇನು ಹೇಳುವುದು? ಅದನ್ನು ಪರಿಹರಿಸಲು ಯಾರೂ ಶಕ್ತರಲ್ಲ. ನಮ್ಮ ಮಗ ಜರತ್ಕಾರುವೇನಾದರೂ ಮನಸ್ಸು ಮಾಡಿದರೆ ನಮ್ಮ ಕಷ್ಟ ಪರಿಹಾರವಾಗಬಹುದು. ಆದರೆ ಅವನು ಮಹಾಮೂರ್ಖ. ಅವನೊಬ್ಬನೇ ಮೋಕ್ಷವನ್ನು ಪಡೆಯಬೇಕೆಂಬ ಆಸೆಯಿಂದ ತಪಸ್ಸು ಮಾಡುತ್ತಿದ್ದಾನೆ. ಆದರೆ ಅವನಿಗೆ 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ವಿಧಿಯ ಜ್ಞಾನವಿಲ್ಲ. ಸಂತತಿಯನ್ನು ಪಡೆಯುವುದರ ಮೂಲಕ ಅವನು ಪಿತೃಋಣವನ್ನು ತೀರಿಸಲಿಲ್ಲ. ಅವನಿಂದಾಗಿ ನಾವೆಲ್ಲ ನರಕಕ್ಕೆ ಬೀಳುತ್ತಿದ್ದೇವೆ. ಅವನಿಂದಾಗಿ, ಎಷ್ಟು ಪುಣ್ಯ ಮಾಡಿದ್ದರೂ ನಮಗೆ ಮೋಕ್ಷವಿಲ್ಲದಾಗಿದೆ. ಏನು ಮಾಡೋಣ' ಎನ್ನುತ್ತಾ ದುಃಖಿಸಿದರು. ಅದಕ್ಕೆ ಜರತ್ಕಾರು ಹೇಳುತ್ತಾನೆ: 'ನಾನೇ ನಿಮ್ಮ ಮಗ ಪಾಪಿಷ್ಠ ಜರತ್ಕಾರು. ನನ್ನಿಂದ ನಿಮಗೆ ಇಷ್ಟೊಂದು ಕಷ್ಟ ಪ್ರಾಪ್ತ ವಾಯಿತು. ನಾನೀಗ ಮುದುಕನಾಗಿದ್ದೇನೆ. ಕಡುದರಿದ್ರನಾಗಿದ್ದೇನೆ. ನಾನಿನ್ನು ಮದುವೆ ಯಾಗಿ ಪುತ್ರವಂತನಾಗುವುದು ಅಸಾಧ್ಯದ ಮಾತು. ನಾನೇನು ಮಾಡಲಿ' ಎಂದು

ಅವನೂ ವಿಲಪಿಸುತ್ತಾನೆ. ಅದಕ್ಕೆ ಆ ಪಿತೃಗಳು ಅವನಿಗೆ ಮದುವೆಯಾಗಲು ಪ್ರಯತ್ನಿಸುವಂತೆ ಆದೇಶಿಸಿದರು.

"ನಾನು ಯಾವ ರೀತಿ ಪ್ರಯತ್ನಿಸಲಿ? ನನಗೆ ಯಾರು ಹೆಣ್ಣು ಕೊಡುತ್ತಾರೆ? ಮದುವೆಯಾದರೆ ಸಂಸಾರವನ್ನು ಸಾಗಿಸುವ ಪರಿಯೆಂತು? ಆದರೆ ಪಿತೃವಾಕ್ಯವನ್ನು ಮೀರುವ ಹಾಗೂ ಇಲ್ಲವಲ್ಲ" ಎಂದು ಚಿಂತಿಸುತ್ತಾ ಅರಣ್ಯಮಧ್ಯಕ್ಕೆ ಹೋಗಿ, "ನಾನು ಜರತ್ಕಾರು. ಜರತ್ಕಾರುವೆಂಬ ಹೆಸರಿನದೇ ಹುಡುಗಿಯನ್ನು ಮದುವೆಯಾಗ ಲಿಚ್ಛಿಸುತ್ತೇನೆ" ಎಂದು ಗಟ್ಟಿಯಾಗಿ ಕೂಗಿ ಹೇಳಿದನು. ಇವನ ಚಲನವಲನಗಳನ್ನೆಲ್ಲಾ ಗಮನಿಸುತ್ತ ಅದೃಶ್ಯನಾಗಿ ಮಾಯಾಶಕ್ತಿಯಿಂದ ಇವನ ಹಿಂದೆಯೇ ಇದ್ದ ವಾಸುಕಿಯು ಥಟ್ಟನೆ ಪ್ರತ್ಯಕ್ಷನಾಗಿ, 'ಮಹಾತ್ಮನಾದ ಜರತ್ಕಾರುಋಷಿಯೇ, ನಿನಗೆ ಸ್ವಾಗತ. ನೀನು ಕನ್ಯಾರ್ಥಿಯಾಗಿದ್ದೀ. ನನ್ನ ತಂಗಿ ಮಾನಸಾ ಎಂಬವಳಿದ್ದಾಳೆ. ಅವಳೂ ನಿನ್ನಂತೆ ತಪಸ್ಸು ಮಾಡಿ ಮಾಡಿ ಜರತ್ಕಾರುವಾಗಿದ್ದಾಳೆ. ನಮ್ಮ ನಾಗಾಲೋಕಕ್ಕೆ ಬಾ' ಎಂದು ಅವನನ್ನು ಕರೆಯುತ್ತಾನೆ. ಆಗ ಋಷಿಯು– "ವಾಸುಕಿ ಮಹಾನಾಗರಾಜ, ನಿನಗೆ ವಂದನೆಗಳು. ನಾನು ಕಡು ದರಿದ್ರ. ಪಿತೃಗಳ ಆದೇಶದಂತೆ ಮದುವೆಯಾಗಲಿಚ್ಛಿಸುತ್ತೇನೆ. ಆದರೆ ಸಂಸಾರವನ್ನು ಸಾಕುವ ಅರ್ಹತೆ ನನಗಿಲ್ಲ" ಎಂದು ಹೇಳಲು, ವಾಸುಕಿಯು– 'ಭರಿಷ್ಯೇ ಭಗಿನೀಮಿತಿ' ಸಂಸಾರ ಸಾಗಿಸುವ ಯೋಚನೆ ನಿನಗೆ ಬೇಡ. ನೀನು ನಾಗಲೋಕದಲ್ಲೆ ಇರು. ನಾನು ನನ್ನ ತಂಗಿಯ ಧಾರಣೆ–ಪೋಷಣೆ ಮಾಡುತ್ತೇನೆ –ಎನ್ನುತ್ತಾನೆ.

ಈ ರೀತಿ ಸಂಸಾರ ಸಾಕುವ ಜವಾಬ್ದಾರಿಯನ್ನು ವಾಸುಕಿ ವಹಿಸಿಕೊಂಡ ಮೇಲೆ ನಾಗಲೋಕವನ್ನು ಜರತ್ಕಾರು ಪ್ರವೇಶಿಸಿದನು. ಬ್ರಹ್ಮಜ್ಞಾನಿಯೂ, ಮಹಾವ್ರತನೂ, ತಪೋವೃದ್ಧನೂ ಆದ ಜರತ್ಕಾರುವು ವಿಧಿಮಂತ್ರಪೂರ್ವಕವಾಗಿ ಮನಸೆಯ ಪಾಣಿಗ್ರಹಣ ಮಾಡಿದನು. ದಂಪತಿಗಳು ನಾಗಲೋಕದಲ್ಲಿ ಸುಖವಾಗಿ ವಿಹರಿಸುತ್ತಿದ್ದರು. ಯುಗಯುಗಗಳು ಕಳೆದವು. ಒಂದು ದಿವಸ ಜರತ್ಕಾರುವು ತನ್ನ ಪತ್ನಿಯ ಮಡಿಲಲ್ಲಿ ತಲೆಯಿಟ್ಟು ಮಲಗಿದ್ದನು. ಸೂರ್ಯಾಸ್ತಮಾನವಾಗು ವುದನ್ನು ಕಂಡ ಮನಸಾದೇವಿಯು ಋಷಿಯ ಸಂಧ್ಯಾವಂದನೆಯ ಕಾಲ ತಪ್ಪ ಬಹುದೆಂದು ಹೆದರಿ ಗಂಡನನ್ನು ಎಬ್ಬಿಸಿದಳು. ಜರತ್ಕಾರುವು ಕೋಪವನ್ನು ನಟಿಸುತ್ತಾ, "ನೀನು ನನ್ನ ನಿದ್ದೆಗೆ ಭಂಗ ತಂದಿದ್ದಿ. ನಾನು ನಿನ್ನೊಂದಿಗೆ ಇಲ್ಲಿ ಇರಲಾರೆ. ಇಂದಿಗೆ ನಿನ್ನ ನನ್ನ ಸಂಬಂಧ ಮುಗಿಯಿತು. ನೀನು ಗರ್ಭಿಣಿಯಾಗಿದ್ದಿ. ನಿನ್ನಣ್ಣನಿಗೂ ನಾಗಕುಲವನ್ನು ರಕ್ಷಿಸಲು ಒಂದು ಮಗು ಬೇಕಾಗಿದೆ. ನನ್ನ ಪಿತೃ ಗಳನ್ನು ಉದ್ಧರಿಸಲು ನನಗೂ ಒಂದು ಮಗು ಬೇಕಾಗಿದೆ. ಆ ಮಗು ನಿನ್ನಲ್ಲಿ ಬೆಳೆಯುತ್ತಲಿದೆ. ನಿನ್ನಲ್ಲಿ ಹುಟ್ಟುವ ಆಸ್ತಿಕನೆಂಬ ಋಷಿಯು ಉಭಯಕುಲವನ್ನೂ

ರಕ್ಷಿಸುತ್ತಾನೆ. ನನಗೆ ನಾಗಲೋಕದ ಸಹವಾಸ ಸಾಕು. ನಾನು ತಪಸ್ಸಿಗೆ ಹೊರಡುತ್ತೇನೆ" ಎಂದು ಹೇಳಿ, ಅವನು ತಪಸ್ಸಿಗೆ ಹೋಗುತ್ತಾನೆ. ಅವಳ ಗರ್ಭದಲ್ಲಿ ಹುಟ್ಟಿದ ಮಗುವೇ ಆಸ್ತಿಕಮುನಿ –ಹುಟ್ಟುಜ್ಞಾನಿ. ಅವನು ತನ್ನ ಮಹಾಬುದ್ಧಿವಂತಿಕೆ, ಮಹಾತಪಶ್ಶಕ್ತಿ, ಮಹಾತೇಜಸ್ಸು ಇವೆಲ್ಲದರಿಂದ ತನ್ನ ಸೋದರಮಾವನ ನಾಗವಂಶ ಪೂರ್ತಿ ನಾಶವಾಗುವುದನ್ನು ತಪ್ಪಿಸಿದನು.

* * *

ಮಹಾಬಲಿಷ್ಠನೂ, ಧೈರ್ಯಶಾಲಿಯೂ ಆದ ಶ್ವೇತಕಿ ಎಂಬ ಒಬ್ಬ ರಾಜರ್ಷಿ ಇದ್ದನು. ಅವನು ಸದಾ ಯಜ್ಞಯಾಗಾದಿಗಳನ್ನು ಮಾಡುವವನೂ ಉದಾರಿಯೂ ಬುದ್ಧಿವಂತನೂ ಆಗಿದ್ದನು. ಅಂತಹ ಇನ್ನೊಬ್ಬ ಚಕ್ರವರ್ತಿಯನ್ನು ಪ್ರಪಂಚವೆಂದೂ ಕಂಡಿಲ್ಲ. ಅವನಿಗೆ ಸಶರೀರಿಯಾಗಿಯೇ ಸ್ವರ್ಗಲೋಕಕ್ಕೆ ಹೋಗಬೇಕೆಂಬ ಇಚ್ಛೆಯುಂಟಾಯಿತು. ಅದಕ್ಕೆ ಏನು ಮಾಡಬೇಕೆಂದು ತಿಳಿಯಲು ಅವನು ರುದ್ರಲೋಕಕ್ಕೆ ಹೋದನು. ರುದ್ರದೇವರು ಅವನಿಗೆ ಸಶರೀರಸ್ವರ್ಗಲೋಕ–ಗಮನೋಪಾಯವಾಗಿ ಈ ರೀತಿ ಉಪದೇಶಿಸಿದರು:

ಬ್ರಹ್ಮಚರ್ಯವ್ರತದಲ್ಲಿದ್ದು ಸದಾಕಾಲ ದೇವರನ್ನು ಸ್ಮರಿಸುತ್ತಾ ೧೨ ವರ್ಷಗಳ ಕಾಲ ಅವಿಚ್ಛಿನ್ನವಾಗಿ ಘೃತಧಾರೆಯಿಂದ ಅಗ್ನಿನಾರಾಯಣನನ್ನು ತೃಪ್ತಿಗೊಳಿಸಿದರೆ ಯಾವುದನ್ನು ನೀನು ಅಪೇಕ್ಷಿಸುತ್ತೀಯೋ ಅದು ಕೈಗೂಡುವುದು.

ಈ ೧೨ ವರ್ಷಗಳ ಸತತ ಆಜ್ಯಧಾರೆಯಿಂದಾಗಿ ಅಗ್ನಿದೇವರಿಗೆ ಅಜೀರ್ಣ ವಾಯಿತು. ಯಾರ ಹವಿಸ್ಸನ್ನೂ ಅನಂತರ ಅವರು ಇಚ್ಛಿಸಲಿಲ್ಲ. ದೇಹವ ಜಡವಾಗಿ ಬಿಳಿಚಿಹೋಯಿತು. ಅಗ್ನಿ ಇಲ್ಲದೆ ಹೋಮಹವನಾದಿಗಳಿಲ್ಲ. ಹೋಮ ಹವನಾದಿ ಗಳಿಲ್ಲದ್ದರಿಂದ ದೇವತೆಗಳಿಗೆ ತೃಪ್ತಿ ಇಲ್ಲವಾಯಿತು. ಇದರ ಪರಿಹಾರಕ್ಕಾಗಿ ದೇವತೆ ಗಳು ಸೇರಿ ಅಗ್ನಿಯನ್ನೂ ಕರೆದುಕೊಂಡು ಬ್ರಹ್ಮದೇವರಲ್ಲಿಗೆ ಹೋದರು. ಬ್ರಹ್ಮದೇವರು ಅದಕ್ಕೆ ಪರಿಹಾರವನ್ನು ಸೂಚಿಸುತ್ತಾರೆ–

ಬಹಳ ಪೂರ್ವಕಾಲದಲ್ಲಿ ದೇವತೆಗಳ ಶತ್ರುಗಳೆಲ್ಲಾ ಖಾಂಡವವನದಲ್ಲಿದ್ದರು. ದೇವತೆಗಳು ನಿನ್ನ ಮೂಲಕ ಆ ಇಡೀ ಖಾಂಡವವನವನ್ನು ಸುಟ್ಟುಹಾಕಿದರು. ಅಲ್ಲೀಗ ಬಹಳ ದೊಡ್ಡ ಅರಣ್ಯ ಬೆಳೆದಿದೆ. ಪ್ರಾಣಿಪಕ್ಷಿಗಳು, ಮರಗಿಡಗಳು ಅಲ್ಲಿ ಸಮೃದ್ಧವಾಗಿವೆ. ಅದನ್ನು ನೀನು ದಹಿಸಿದ್ದೇ ಆದರೆ (ಭಕ್ಷಿಸಿದರೆ) ನೀನು ಅವುಗಳ ಮೇದಸ್ಸಿನಿಂದ ತೃಪ್ತನಾಗಿ, ಸ್ವಸ್ಥನಾಗುತ್ತೀ.

ಕೃಷ್ಣಾರ್ಜುನರ ಸಹಾಯದಿಂದ ಖಾಂಡವವನದಹನ ಪ್ರಾರಂಭ

ಮೋಡಗಳನ್ನು ತಮ್ಮ ದಿವ್ಯಾಸ್ತ್ರಗಳಿಂದ ಚದುರಿಸಿ ಪ್ರಾಣಿಗಳೂ ಕಾಡಿನಿಂದ ಹೊರಗೆ ಹೋಗದ ಹಾಗೆ ತಡೆಯುತ್ತಿರುವ ಕೃಷ್ಣಾರ್ಜುನರನ್ನು ಕಂಡು ಕೋಟಿಗಟ್ಟಲೆ ಸರ್ಪಗಣಗಳು ಕೃಷ್ಣಾರ್ಜುನರ ಸಮೀಪಕ್ಕೆ ಬಂದು ವಿಷ ಕಾರಿದುವು. ಆದರೆ ಕೃಷ್ಣಾರ್ಜುನರ ಬಾಣಪ್ರಯೋಗದಿಂದಲೂ, ಬೆಂಕಿಯ ಜ್ವಾಲೆಯಿಂದಲೂ ಸತ್ತು ಬಿದ್ದವು.

ಹೊರಗೆ ಹೋಗಲು ಪ್ರಯತ್ನಿಸುವ ಎಲ್ಲಾ ಸರ್ಪಗಳನ್ನೂ ಅರ್ಜುನನು ಶಸ್ತ್ರಾಸ್ತ್ರಗಳಿಂದ ಬೆಂಕಿಗೆ ಬೀಳುವಂತೆ ಮಾಡಿದನು.

ಆ ಕಾಡನ್ನು ಸುಡುತ್ತಿರುವಾಗ ೬ ಮಂದಿಯನ್ನು ಮಾತ್ರ ಅಗ್ನಿಯು ದಹಿಸದೆ ಬಿಟ್ಟನು. ತಕ್ಷಕ, ಅಶ್ವಸೇನ, ಮಯ, ೪ ಪಕ್ಷಿಗಳು ಬದುಕಿ ಉಳಿದರು.

ವೇದನೆಂಬ ಮಹರ್ಷಿಗೆ ಉತ್ತಂಕನೆಂಬ ಶಿಷ್ಯನಿದ್ದನು. ಬಹುಕಾಲ ಗುರುಕುಲ ವಾಸ ಮಾಡಿ ಗುರುಗಳ ಅನುಗ್ರಹವನ್ನು ಹೊಂದಿದನು. ನೀನು ಇನ್ನು ಮನೆಗೆ ಹೋಗಬಹುದೆಂಬ ಗುರುವಚನವನ್ನು ಕೇಳಿ ಗುರುದಕ್ಷಿಣಾರೂಪದಲ್ಲಿ ಏನು ಕೊಡಬೇಕೆಂದು ಕೇಳಿದನು. 'ಏನೂ ಬೇಡ, ನಿನಗೆ ನನ್ನ ಸಂಪೂರ್ಣ ಅನುಗ್ರಹ ವಿದೆ' ಎಂದು ಹಲವು ಸಲ ಗುರುಗಳು ಹೇಳಿದರು. ಪುನಃ ಒಂದು ದಿನ ಮನೆಗೆ ಹೋಗುವುದಕ್ಕೆ ಮೊದಲು ನಿಮಗೇನಾದರೂ ಗುರುದಕ್ಷಿಣಾರೂಪದಲ್ಲಿ ಕೊಡಬೇಕೆಂದಿದ್ದೇನೆಂದು ಹೇಳಲು ಗುರುಗಳು ಹೇಳಿದರು: 'ವತ್ಸ, ನಾನು ಯಾವ ಅಪೇಕ್ಷೆಯೂ ಇರುವವನಲ್ಲ. ನಿನಗೆ ಕೊಡಲೇಬೇಕೆಂದಿದ್ದರೆ ನನ್ನ ಪತ್ನಿಯನ್ನು ಕೇಳು' ಎಂದು ಹೇಳಿದರು. ಪತ್ನಿಯನ್ನು ಕೇಳಿದಾಗ, 'ಸೂರ್ಯವಂಶದ ಪೌಷ್ಯನೆಂಬ ರಾಜನಿದ್ದಾನೆ. ಅವನ ಹೆಂಡತಿಯ ಕಿವಿಯಲ್ಲಿ ಅಮೂಲ್ಯವಾದ ಕುಂಡಲಗಳಿವೆ. ಬರುವ ಪುಣ್ಯವ್ರತದ ಸಮಯದಲ್ಲಿ ಅದನ್ನು ಧರಿಸಿಕೊಂಡು ಅತಿಥಿಗಳನ್ನು ಉಪಚರಿಸಬೇಕೆಂದಿದ್ದೇನೆ. ಅದನ್ನು ತೆಗೆದುಕೊಂಡು ಬಾ' ಎಂದು ಹೇಳುತ್ತಾಳೆ. ಅವನು ಆ ರಾಜಪತ್ನಿಯನ್ನು ಕಂಡು ಕುಂಡಲಗಳನ್ನು ಕೇಳಿದಾಗ 'ಈ ಕುಂಡಲಗಳ ಬಗ್ಗೆ ನಾಗರಾಜ ತಕ್ಷಕನಿಗೆ ತುಂಬಾ ಆಸೆ ಇದೆ. ಆದ್ದರಿಂದ ಎಚ್ಚರದಿಂದ ತೆಗೆದುಕೊಂಡು ಹೋಗು' ಎಂದು ಅದನ್ನು ಕೊಡುತ್ತಾಳೆ. ಹಾಗೆಯೇ ಆಗಲೆಂದು ಅದನ್ನು ತೆಗೆದುಕೊಂಡು ಬರುವಾಗ ಒಬ್ಬ ಸನ್ಯಾಸಿ ಇವನನ್ನು ಹಿಂಬಾಲಿಸಿಕೊಂಡೇ ಬರುತ್ತಾನೆ. ಉತ್ತಂಕನು ಸಂಧ್ಯಾವಂದನೆಯ ಉದ್ದೇಶದಿಂದ ಅದನ್ನು ಕೆಳಗಿಟ್ಟು ಸಂಧ್ಯಾವಂದನೆ ಮಾಡುವಾಗ ಆ ಬೈರಾಗಿ ಬಂದು ಅದನ್ನು ಎತ್ತಿಕೊಂಡು ಓಡುತ್ತಾನೆ. ಅವನನ್ನು ಹಿಡಿಯಲು ಇವನೂ ಓಡುತ್ತಾನೆ. ಅವನು ಒಂದು ಬಿಲದ ಬಳಿ ಬಂದು ತಕ್ಷಕರೂಪವನ್ನು ಧರಿಸಿ ಬಿಲದೊಳಗೆ ಹೋಗುತ್ತಾನೆ.

ಬಿಲವನ್ನು ಅಗೆದು ಅವನನ್ನು ಹಿಂಬಾಲಿಸಲು ಪ್ರಯತ್ನಪಟ್ಟರೂ ಉತ್ತಂಕನಿಗೆ ಬಿಲವನ್ನು ಅಗೆಯಲಾಗುವುದಿಲ್ಲ. ಇಂದ್ರನು ಉತ್ತಂಕನಿಗೆ ಮೊದಲೇ ಅಮೃತವನ್ನು ಕುಡಿಸಿರುತ್ತಾನೆ. ಈಗ ಬಿಲವನ್ನು ಅಗೆಯಲಿಕ್ಕೆ ವಜ್ರಾಯುಧವನ್ನು ಕಳುಹಿಸುತ್ತಾನೆ. ಅದು ಇವನು ಅಗೆಯುವ ಕೋಲಿನಲ್ಲೇ ಆವೇಶಗೊಂಡು ಆ ಬಿಲವನ್ನು ಬಹಳ ಆಳವಾಗಿ ಕೊರೆಯುವುದು. ಆ ದಾರಿಯಲ್ಲೇ ಇವನು ನಾಗಲೋಕಕ್ಕೆ ಹೋಗುತ್ತಾನೆ. ಅಲ್ಲ ನಾಗಗಳ ಸ್ತೋತ್ರವನ್ನು ನಾನಾ ಪರಿ ಮಾಡಿದರೂ ಇವನಿಗೆ ಕುಂಡಲಗಳು ಸಿಕ್ಕುವುದಿಲ್ಲ. ಅವನು ತೀವ್ರ ನಿರಾಶೆಗೊಂಡಾಗ ಅಗ್ನಿದೇವರು ಸಹಾಯಕ್ಕೆ ಬರುತ್ತಾರೆ. ಅಗ್ನಿದೇವರ ತೇಜಸನ್ನು ಸಹಿಸಲಾರದೆ ತಕ್ಷಕನು ಕುಂಡಲಗಳನ್ನು ಉತ್ತಂಕನಿಗೆ ಮರಳಿಸುತ್ತಾನೆ. ಅದನ್ನು ಗುರುಪತ್ನಿಗೆ ಕೊಟ್ಟು ಗುರುಗಳ ಹಾಗೂ ಗುರುಪತ್ನಿಯ ಅನುಗ್ರಹವನ್ನು ಉತ್ತಂಕನು ಸಂಪಾದಿಸುತ್ತಾನೆ.

ಆದರೆ ಉತ್ತಂಕನಿಗೆ ನೆಮ್ಮದಿ ಇರುವುದಿಲ್ಲ. 'ತಕ್ಷಕನು ಇಷ್ಟು ದೊಡ್ಡ ನಾಗರಾಜನಾಗಿದ್ದು ತಾನು ಗುರುಪತ್ನಿಗೆ ಕೊಡಲಿಚ್ಛಿಸಿದ ಕುಂಡಲಗಳನ್ನು ಕದ್ದುಕೊಂಡು ಹೋಗಿ ತನಗೆ ಎಷ್ಟೊಂದು ಕಿರುಕುಳಗಳನ್ನು ಕೊಟ್ಟನು. ಏನೋ ಇಂದ್ರಾಗ್ನಿದೇವತೆಗಳ ಸಹಾಯದಿಂದ ತಾನು ನಾಗಲೋಕದಿಂದ ಅದನ್ನು ತರಲು ಸಾಧ್ಯವಾಯಿತು. ಇಲ್ಲವಾದರೆ ಗುರುಪತ್ನಿಯ ಶಾಪಕ್ಕೆ ಗುರಿಯಾಗಬೇಕಿತ್ತು.

ಮುಯ್ಯಿಗೆ ಮುಯ್ಯಿ ನಾನು ತೀರಿಸಲೇಬೇಕು ಎಂದು ಯೋಚಿಸುತ್ತಿರುವಾಗಲೆ ಪರೀಕ್ಷಿದ್ರಾಜನಿಗೆ ಶೃಂಗಿಯು ಶಾಪ ಕೊಟ್ಟನೆಂದೂ, ಶೃಂಗಿಯ ಶಾಪದಿಂದಾಗಿ ತಕ್ಷಕನು ಪರೀಕ್ಷಿತ್‌ರಾಜನನ್ನು ಕಚ್ಚಿ ಸಾಯಿಸಿದನೆಂದೂ, ಅವನ ಮಗ ಜನಮೇಜಯನು ರಾಜಗದ್ದುಗೆ ಏರಿದನೆಂದೂ ಅವನಿಗೆ ವರ್ತಮಾನ ತಲುಪಿತು. ತತ್‌ಕ್ಷಣ ಉತ್ತಂಕನು ಜನಮೇಜಯನನ್ನು ಸಮೀಪಿಸಿ ಮಾತನಾಡುತ್ತಾನೆ. ಕ್ಷತ್ರಿಯರಾಜನಾದ ನೀನು ನಿನ್ನ ತಂದೆಯನ್ನು ಕೊಂದ ತಕ್ಷಕನ ಬಗ್ಗೆ ಏನು ಕ್ರಮ ಕೈಗೊಂಡಿದ್ದಿ? ಅಭಿಮಾನಧನರಾದ ಕ್ಷತ್ರಿಯರಾಜರುಗಳಿಗೆ ಶತ್ರುಗಳ ಬಗ್ಗೆ ಕ್ರಮ ಕೈಗೊಳ್ಳುವುದು ಕರ್ತವ್ಯವೇ ಆಗಿರುತ್ತದೆ. ಆದ್ದರಿಂದ ನೀನು ಸರ್ಪಸತ್ರವನ್ನು ಮಾಡು. ನಿನ್ನ ತಂದೆಯ ಸಾವಿಗೆ ಕಾರಣನಾದ ತಕ್ಷಕನನ್ನು ಆ ಯಜ್ಞಾಗ್ನಿಯಲ್ಲಿ ಹೋಮಿಸು. ಆಗ ನಿನ್ನ ತಂದೆಯ ಆತ್ಮಕ್ಕೆ ಶಾಂತಿ ಸಿಕ್ಕುತ್ತದೆ. ಪುತ್ರನಾಗಿ ನಿನ್ನ ಕರ್ತವ್ಯವನ್ನು ನೀನು ಮಾಡಿ ಕೃತಾರ್ಥನಾಗುತ್ತೀ. ನಿನ್ನ ಸಾಹಸವನ್ನು ಪ್ರಜೆಗಳೂ ಕೊಂಡಾಡುತ್ತಾರೆ' ಎಂದು ಹೇಳಿದನು. ರಾಜನಿಗೆ ಅದು ಸರಿಯೆಂದು ತೋರಿತು. ಅವನು ಅನೇಕ ಋಷಿಗಳನ್ನೂ, ಶ್ರೋತ್ರಿಯಋತ್ವಿಕ್ಕುಗಳನ್ನೂ ಕರೆದು ಸಭೆಯಲ್ಲಿ ಈ ಬಗ್ಗೆ ಚರ್ಚಿಸಿ ಸರ್ಪಯಜ್ಞವನ್ನು ಪ್ರಾರಂಭಮಾಡಿದನು. ಅದರಲ್ಲಿ ಜೀವಂತ ಸರ್ಪಗಳನ್ನೆ ಅಗ್ನಿಗೆ ಆಹುತಿಯಾಗಿ ಕೊಟ್ಟನು.

ಬೇರೆಬೇರೆ ನಾಗಕುಲಗಳಲ್ಲಿ ಹುಟ್ಟಿದ ಅಸಂಖ್ಯ ನಾಗಗಣಗಳು ಘೋರ ರೂಪಿಗಳಾಗಿ ಮಹಾಬಲಿಷ್ಠರಾಗಿದ್ದರೂ ಜನಮೇಜಯನ ಸರ್ಪಸತ್ರದಲ್ಲಿ ದೇಹ ನಾಶವನ್ನು ಹೊಂದಿದರು. ರಾಜ ನೋಡುತ್ತಿದ್ದಾನೆ, ನಾನಾ ಆಕಾರ ಹಾಗೂ ನಾನಾ ವರ್ಣದ ಅನೇಕಾನೇಕ ಸರ್ಪಗಣಗಳು ಹೋಮಕುಂಡದಲ್ಲಿ ಬೀಳುತ್ತಿದ್ದರೂ ತನ್ನ ತಂದೆಯ ಮೃತ್ಯುವಿಗೆ ಮುಖ್ಯ ಕಾರಣನಾದ, ಈ ಯಜ್ಞದ ಮುಖ್ಯ ಆಹುತಿ ರೂಪದ ಲಕ್ಷ್ಯವಾದ ತಕ್ಷಕನು ಬರುವ ಲಕ್ಷಣ ಕಾಣಿಸುತ್ತಿಲ್ಲ. ರಾಜನಿಗೆ ಚಿಂತೆ ಪ್ರಾರಂಭವಾಗಿ 'ತಕ್ಷಕನ ಹತ್ಯೆಗೋಸ್ಕರ ಈ ಯಜ್ಞ, ಅವನನ್ನು ಬೇಗ ಹೋಮಿಸಿ' ಎಂದು ಋಷಿಗಳಿಗೆ ಸೂಚಿಸುತ್ತಾನೆ. ಋಷಿಗಳು ಧ್ಯಾನದೃಷ್ಟಿಯಿಂದ ನೋಡುವಾಗ ತಕ್ಷಕನು ತನ್ನ ಗೆಳೆಯನಾದ ಇಂದ್ರನನ್ನು ಆಶ್ರಯಿಸಿದ್ದು ತಿಳಿಯಿತು. ತಕ್ಷಕನನ್ನು ಇಂದ್ರನು ಬಿಡುತ್ತಿಲ್ಲವೆಂದು ಅವರಿಗೆ ಮನದಟ್ಟಾಯಿತು. **'ಸಹೇಂದ್ರಾಯ ತಕ್ಷಕಾಯ ಸ್ವಾಹಾ'** ಎಂದು ಅವರು ಹೋಮಿಸುವ ಯೋಚನೆ ಮಾಡಿದರು. ಈ ಸಮಯದಲ್ಲಿ ವಾಸುಕಿಯ ಸೋದರಳಿಯನಾದ ಆಸ್ತಿಕಋಷಿಯ ಪ್ರವೇಶವಾಯಿತು. ಅವನು ಜನಮೇಜಯರಾಜನನ್ನೂ ಆ ವಂಶದ ಪೂರ್ವಿಕರನ್ನೂ, ಆ ಯಜ್ಞವನ್ನೂ ನಾನಾವಿಧವಾಗಿ ಪ್ರಶಂಸಿಸುತ್ತಾನೆ. ಮಹಾತೇಜಸ್ವಿಯಾದ ಆ ಋಷಿಯ ವಚನಾಮೃತ ವನ್ನು ಸವಿಯುತ್ತಾ ಸಂತಸಗೊಂಡ ರಾಜನು ಆ ಋಷಿಗೆ ಅರ್ಘ್ಯಪಾದ್ಯಾದಿ ಉಪಚಾರಗಳನ್ನು ಸಲ್ಲಿಸಿ 'ತಾವು ಏನು ಕೇಳಿದರೂ ಕೊಡುತ್ತೇನೆ, ತಮ್ಮ ಅಭಿಮತ ವನ್ನು ಸಲ್ಲಿಸಲು ಸಿದ್ಧನಾಗಿದ್ದೇನೆ' ಎಂದು ಹೇಳುತ್ತಾನೆ. ಅಲ್ಲಿನ ಮುಖ್ಯ ಪುರೋಹಿತರು ಮೊದಲೇ, ಯಜ್ಞ ಪೂರ್ತಿಯಾಗಬೇಕಾದರೆ ಬಂದ ಬ್ರಾಹ್ಮಣನ ಅಭೀಷ್ಟವನ್ನು ನೆರವೇರಿಸಬೇಕೆಂದು ಆದೇಶಿಸಿರುತ್ತಾರೆ. ಇದೇ ಸಂದರ್ಭವನ್ನು ಉಪಯೋಗಿಸಿಕೊಂಡು ಆಸ್ತೀಕ ಮುನಿ ಹೀಗೆ ಹೇಳುತ್ತಾನೆ:

**ಸತ್ರಂ ತೇ ವಿರಮತ್ವೇತನ್ನ ಪತೇಯುರಿಹೋರಗಾಃ ।**

ರಾಜನೇ, ನನಗೇನೂ ಬೇಕಾಗಿಲ್ಲ. ಈ ನಿನ್ನ ಸತ್ರ ಕೂಡಲೆ ನಿಲ್ಲಬೇಕು. ಯಾವ ಸರ್ಪಾಹುತಿಯೂ ಇಲ್ಲಿ ಕೂಡದು' ಎನ್ನುತ್ತಾನೆ. ಇದೇ ಸಂದರ್ಭದಲ್ಲಿ ಹೆದರಿದ ಇಂದ್ರನಿಂದ ಮುಕ್ತನಾದ ತಕ್ಷಕನು ಹೋಮಕುಂಡದಲ್ಲಿ ಬೀಳಲು ಮಂತ್ರಬಲದಿಂದ ಎಳೆಯಲ್ಪಟ್ಟಿದ್ದ. ಆದರೆ ಯಜ್ಞವಿರಾಮವಾಗಲಿ ಎಂದು ಆಸ್ತೀಕನ ಬೇಡಿಕೆಯನುಸಾರ ರಾಜನ ಘೋಷಿಸಿದ ಕೂಡಲೆ ಸರ್ಪಸತ್ರ ನಿಂತಿತು. ತಕ್ಷಕನು ಅಪಾಯದಿಂದ ಮುಕ್ತನಾದ. ಇದರಿಂದಾಗಿ ಅಷ್ಟಕುಲನಾಗಗಳೂ, ಅವರ ಮುಖ್ಯ ಪರಿವಾರವಾದ ಸರ್ಪಗಣಗಳೂ ಉಳಿದುಕೊಂಡವು. ಆಸ್ತೀಕನ ಸ್ಮರಣೆಯನ್ನು ಯಾರು ಮಾಡುತ್ತಾರೋ ಅವರಿಗೆ ಯಾವುದೇ ಸರ್ಪದಿಂದ ಭಯವಿಲ್ಲ

ವೆನ್ನಲಾಗಿದೆ. ವಾಸುಕಿಯ ಸೋದರಳಿಯನಾದ ಆಸ್ತಿಕನಿಗೆ ಸರ್ಪಕುಲಸಂರಕ್ಷಕನೆಂಬ ಹೆಸರು ಸ್ಥಿರವಾಯಿತು.

ಇಡೀ ದೇಶದ ಪ್ರತಿನಿಧಿಯಾದ ಚಕ್ರವರ್ತಿಯೊಬ್ಬ ನಡೆಸಿದ ಅಭೂತಪೂರ್ವ ಸರ್ಪಸತ್ರ, ಇದರ ಪರಿಣಾಮವಾಗಿ ನಡೆದ ಕೋಟಿಗಟ್ಟಲೆ ಸರ್ಪಗಣಗಳ ಹತ್ಯೆ –ಇದು ಇಡೀ ದೇಶದ ಎಲ್ಲ ಪ್ರಜೆಗಳ ಮನಸ್ಸನ್ನು ಕಲಕಿದ ಹಾಗೆ ಕಾಣುತ್ತದೆ. ನರಕುಲದಿಂದ ನಡೆದ ನಾಗಹತ್ಯೆ ಇದು. ಈ ನಾಗಶಾಪ ಅಲ್ಲಿನ ಋತ್ವಿಕ್ಕುಗಳಿಗೂ, ಯಜಮಾನನಾದ ಜನಮೇಜಯನಿಗೂ ಸಮಸ್ತ ದೇಶದ ಪ್ರಜೆಗಳಿಗೂ ತಟ್ಟಿತು. ಅನಂತರದ ಕಾಲಗಳಲ್ಲಿ ಇದಕ್ಕೆ ಪ್ರತ್ಯೇಕ ಪರಿಹಾರವನ್ನು ಕಂಡುಹಿಡಿಯಲಾಯಿತು. ಈ ಮೃತನಾಗಗಳೊಂದಿಗೆ ನಾಗಶಾಪದಿಂದಾಗಿ ಸರ್ಪಸತ್ರದಲ್ಲಿ ಮುಖ್ಯ ಭಾಗವನ್ನು ವಹಿಸಿದ ಋತ್ವಿಕ್ಕುಗಳೂ ಯಜಮಾನನಾದ ಜನಮೇಜಯನೂ ಸೇರಿಕೊಂಡ. ಆ ಮೃತಾತ್ಮಗಳ ಶಾಂತಿಗೋಸ್ಕರ ಒಂದು ರೀತಿಯ ಪ್ರಾಯಶ್ಚಿತ್ತನಿರೂಪಣೆಯುಂಟಾಯಿತು. ಅದೇ ಆಶ್ಲೇಷಾಬಲಿ.

ಸರ್ಪನ ಆಗ್ರಹಕ್ಕೆ ಒಳಗಾದವನು ಸರ್ಪನೇ ಆಗುತ್ತಾನೆಂದು ವಚನವಿದೆ. ನಾಗನಿಂದ ಕಚ್ಚಲ್ಪಟ್ಟ ಮನುಷ್ಯನು ಸತ್ತಮೇಲೆ ನಾಗಲೋಕದಲ್ಲಿ ವಿಷವಿಲ್ಲದ ಹಾವಾಗುತ್ತಾನೆ.

* * *

ಪ್ರಚಲಿತವಿರುವಂತೆ **ಆಶ್ಲೇಷಾಬಲಿ**ಯಲ್ಲಿ ಅನೇಕ ಬದಲಾವಣೆಗಳು ಉಂಟಾಗಿವೆ. ಹೆಸರುಗಳು ಅಪಭ್ರಷ್ಟವಾಗಿವೆ. ಒಬ್ಬೊಬ್ಬರ ರೀತಿ ಒಂದೊಂದಾಗಿದೆ. ಕಲ್ಪನೆಗಳೂ ಬದಲಾಗಿವೆ. ಪುರಾಣಗಳಲ್ಲಿಯೂ ಬೇರೆ ಬೇರೆ ವಿಧಗಳು ಪ್ರೋಕ್ತವಾಗಿವೆ. ಮಂಡಲದ ಕ್ರಮಗಳೂ ಅನೇಕವಿವೆ. ಮೂಲದ ಪ್ರಯೋಗ ಗ್ರಂಥಗಳಲ್ಲಿ ಈ ಬದಲಾವಣೆಗಳು ಯಾವುದೂ ಕಾಣುವುದಿಲ್ಲ. ಆಶ್ಲೇಷಾಬಲಿಯ ವಿಶೇಷವೇನೆಂದರೆ ಹಲವು ವಿದ್ವಾಂಸರು ಹಲವಾರು ಆಧಾರಗಳನ್ನಿಟ್ಟುಕೊಂಡು ಈಗಲೂ ಹೊಸ ಹೊಸ ರೀತಿಯ ಪ್ರಯೋಗಗ್ರಂಥಗಳನ್ನು ಬರೆಯುತ್ತಿರುವುದು. ಶಾಸ್ತ್ರಕಾರರ ಅಭಿಪ್ರಾಯದಲ್ಲಿ ವಾಸುಕಿ ಅನಂತರು ಬೇರೆ ಬೇರೆ. ಆದರೆ ಹಲವು ಪ್ರಯೋಗಗ್ರಂಥಗಳಲ್ಲಿ ಮಾತ್ರ ಅನಂತದೇವರದ್ದೇ ಧ್ಯಾನ ವಾಸುಕಿಯದ್ದು. ಇದು ಅಷ್ಟು ಸಮಂಜಸವಲ್ಲ. ಧ್ಯಾನ ಹಾಗೂ ಮಂತ್ರ ಎರಡಕ್ಕೂ ತಂತ್ರಸಾರಸಂಗ್ರಹದಲ್ಲಿ ಹೇಳಿರುವಂತೆ ಮಾಡಬಹುದು. ಅದಕ್ಕೆ ಸರಿಯಾಗಿ ಕಲ್ಪೋಕ್ತಪೂಜೆಯನ್ನು ತಿದ್ದಿಕೊಳ್ಳಬೇಕು.

ಋಗ್ವೇದೀಯ ಬ್ರಹ್ಮಕರ್ಮಸಮುಚ್ಚಯದಲ್ಲಿ ನಾಗಲಿ (ಸರ್ಪಸಂಸ್ಕಾರ) ವಿಷಯ

ಹೇಳುವಾಗ ೮ ಮಂದಿಯನ್ನು ಹೆಸರಿಸಿದರು. ಸೈದ್ಧಾಂತಿಕವಾಗಿ ಸರ್ಪ-ನಾಗರಿಗೆ ವ್ಯತ್ಯಾಸವಿದ್ದರೂ ಪ್ರಯೋಗಗ್ರಂಥಗಳಲ್ಲಿ ಹಾಗೂ ಮಹಾಭಾರತದಲ್ಲಿ ಹಲವು ಕಡೆ ಸರ್ಪ-ನಾಗ ಶಬ್ದಗಳು ಪರ್ಯಾಯ ಶಬ್ದದ ಹಾಗೆ ಉಪಯೋಗವಾಗಿವೆ. ಬ್ರಹ್ಮಕರ್ಮಸಮುಚ್ಚಯದಲ್ಲಿ ಅದರ ಗಾಯತ್ರಿ ಹೀಗಿದೆ-

ಭುಜಂಗೇಶಾಯ ವಿದ್ಮಹೇ ಸರ್ಪಜಾತಾಯ ಧೀಮಹಿ । ತನ್ನೋ ನಾಗಃ ಪ್ರಚೋದಯಾತ್ ॥

ಇಲ್ಲಿ ಅಷ್ಟನಾಗಗಳಲ್ಲಿ ಎರಡು ಶಬ್ದಗಳು ಸರ್ಪ ಮತ್ತು ನಾಗ ಎಂಬ ಸಾಮಾನ್ಯ ಶಬ್ದಗಳು. ಇದರ ಆವಾಹನಪ್ರಕರಣದಲ್ಲಿ **'ಏಹಿ ಪೂರ್ವಮೃತ ಸರ್ಪ ಅಸ್ಮಿನ್ ಪಿಷ್ಟೇ ಸಮಾವಿಶ'** ಎಂದಿರುವುದರಿಂದ ಪೂರ್ವಮೃತ ಸರ್ಪದ ಹೆಸರು ಗೊತ್ತಿಲ್ಲದ್ದರಿಂದ (ಅಥವಾ ಅದಕ್ಕೆ ಹೆಸರಿಲ್ಲದ್ದರಿಂದ) ಪೂರ್ವಮೃತಸರ್ಪ ಎಂದು ಅದನ್ನು ಕರೆಯುವುದಾಗಿದೆ. ಅಲ್ಲಿಗೆ ಅದು ಸರಿಹೋಗಬಹುದು. ಆಶ್ಲೇಷಾಬಲಿಯಲ್ಲಿ ವಾಸುಕಿ ಪ್ರಮುಖ ಅಷ್ಟಕುಲನಾಗ ಎಂದು ಹೇಳುವುದರಿಂದ ಈ ಅಷ್ಟಕುಲ ನಾಗಗಳಲ್ಲಿ ಸರ್ಪ-ನಾಗ ಶಬ್ದಗಳ ಔಚಿತ್ಯ ಕಾಣುವುದಿಲ್ಲ. ಅಷ್ಟಕುಲ ನಾಗಗಳು ಬೇರೆಯೇ ಇದ್ದಾರೆ. ಅವರು ಬಹಳ ಪ್ರಧಾನರೂ ಆಗಿದ್ದಾರೆ. ಆಶ್ಲೇಷಾ ಬಲಿಯಲ್ಲಿ ನವಪದಮಂಡಲದಲ್ಲಿ ಆ ಪ್ರಧಾನ ಅಷ್ಟಕುಲನಾಗಗಳನ್ನು ಆವಾಹಿಸು ವುದು ಸೂಕ್ತವೆಂದು ಕಾಣುತ್ತದೆ. ಕಲ್ಪೋಕ್ತಪೂಜೆಯಲ್ಲಿಯೂ ಆವಾಹನೆ ಮಾಡುವ ಶ್ಲೋಕದಲ್ಲಿ-

**ಅನಂತಂ ವಾಸುಕಿಂ ಚೈವ ತಕ್ಷಕಕೋರ್ಟಕೌ ತಥಾ ।**
**ಪದ್ಮಂ ಚೈವ ಮಹಾಪದ್ಮಂ ಶಂಖಂ ಚ ಗುಲಿಕಂ ತಥಾ ॥**

ಎಂದು ಹೇಳಲಾಗಿದೆ. ಈ ಶ್ಲೋಕಪ್ರಕಾರವೇ ಅನಂತಾದಿ ೮ ನಾಗಗಳನ್ನು ಆವಾಹಿಸಬಹುದು. 'ಮಧ್ಯೇ ಸಂಕರ್ಷಣಂ ವಿದ್ಯಾತ್' ಎಂಬ ಒಂದು ನ್ಯಾಯವಿದೆ. ಎಲ್ಲಾ ನಾಗಗಳಿಗೆ ಅಂತರ್ಯಾಮಿಯಾದ ಸಂಕರ್ಷಣರೂಪಿ ಪರಮಾತ್ಮ ಮಧ್ಯದಲ್ಲಿ. ಹೀಗೆ ನವಪದಮಂಡಲದಲ್ಲಿ ಈ ಅಷ್ಟಕುಲನಾಗಗಳ ಮಧ್ಯದಲ್ಲಿ ಸಂಕರ್ಷಣರೂಪಿ ಪರಮಾತ್ಮನನ್ನು ಆವಾಹಿಸುವುದು ಹೆಚ್ಚು ಸೂಕ್ತ. ನಾಗದೇವತೆಗಳು ದಿವ್ಯಜ್ಞಾನ ಉಳ್ಳವರೂ ನಿಗ್ರಹಾನುಗ್ರಹಶಕ್ತಿಯುಳ್ಳವರೂ ಕಾಮರೂಪಿಗಳೂ ಆಗಿದ್ದಾರೆಂದು ಪುರಾಣಗಳಲ್ಲಿ ವರ್ಣನೆ ಇದೆ.

'ಸಂಕರ್ಷಣಾತ್ಮಾ ನಾಗೇಷು ಸರ್ವೇಷ್ವಹಮವಸ್ಥಿತಃ' ಎಂಬ ವಚನಾನುಸಾರ ಅಂತರ್ಯಾಮಿಯಾಗಿ ಸಂಕರ್ಷಣರೂಪಿ ಪರಮಾತ್ಮನಿದ್ದು ಮಧ್ಯದಲ್ಲಿ ಪ್ರಧಾನ ದೇವತೆಯಾಗಿ ಅವನನ್ನೇ ಪೂಜಿಸುತ್ತ ಅಷ್ಟಕುಲನಾಗರನ್ನು ಪೂಜಿಸುವುದು ಸಮುಚಿತ.

ಆಶ್ಲೇಷಾಬಲಿಯ ಫಲಶ್ರುತಿಯನ್ನು ಈ ರೀತಿ ಹೇಳಿದ್ದಾರೆ–

ಏವಂ ಯಃ ಕುರುತೇ ಭಕ್ತ್ಯಾ ಆಶ್ಲೇಷಾಬಲಿಮುತ್ತಮಮ್ ।
ಸರ್ಪಶಾಪನಿವೃತ್ತಿಶ್ಚ ಸರ್ವರೋಗನಿವಾರಣಮ್ ॥

ದುಃಖದಾರಿದ್ರ್ಯನಾಶಶ್ಚ ಸರ್ವಸಿದ್ಧಿಶ್ಚ ಜಾಯತೇ ।
ಸಂಕರ್ಷಣಾತ್ಮಾ ನಾಗೇಷು ಸ್ಥಿತ್ವಾ ತುಷ್ಟೋ ವರಪ್ರದಃ ॥

ಯಃ ಕರೋತಿ ಮಹಾಪೂಜಾಂ ಮಹದಿಷ್ಟಾರ್ಥಸಿದ್ಧಯೇ ।
ಮನೋರಥಮಿಹಪ್ರಾಪ್ಯ ಪ್ರಾಪ್ನೋತಿ ಪರಮಾಂ ಗತಿಮ್ ॥

ಈ ರೀತಿ ಯಾರು ಆಶ್ಲೇಷಾಬಲಿ ಮಾಡುತ್ತಾರೋ ಅವರಿಗೆ ಸರ್ವವಿಧ ಸರ್ಪಶಾಪ ನಿವೃತ್ತಿಯೂ, ಸರ್ವರೋಗನಿವೃತ್ತಿಪೂರ್ವಕ ಅವರಿಗೆ ಆರೋಗ್ಯ ಪ್ರಾಪ್ತಿಯೂ ದುಃಖಶಮನವೂ, ಐಶ್ವರ್ಯವೃದ್ಧಿಯೂ, ಸರ್ವಾಭೀಷ್ಟಪ್ರಾಪ್ತಿಯೂ ಉಂಟಾಗುತ್ತದೆ. ನಾಗಾಂತರ್ಯಾಮಿಯಾದ ಸಂಕರ್ಷಣರೂಪಿ ಪರಮಾತ್ಮನು ಸಂತುಷ್ಟನಾಗಿ ವರಗಳನ್ನು ಕರುಣಿಸುತ್ತಾನೆ. ಇಷ್ಟಾರ್ಥಸಿದ್ಧಿಗೋಸ್ಕರ ಯಾರು ಆಶ್ಲೇಷಾಬಲಿಯನ್ನು ಮಾಡಿ ಮಹಾಪೂಜೆಯನ್ನು ಮಾಡುತ್ತಾರೋ ಅವರು ತಮ್ಮ ಎಲ್ಲಾ ಬಯಕೆಗಳನ್ನು ಈಡೇರಿಸಿಕೊಂಡು ಇಹಲೋಕದಲ್ಲಿ ಸರ್ವಸುಖಗಳನ್ನೂ ಅನುಭವಿಸಿ, ದೇಹಾಂತದಲ್ಲಿಯೂ ಉತ್ತಮ ಲೋಕವನ್ನು ಹೊಂದುತ್ತಾರೆ.

ಈ ಆಶ್ಲೇಷಾಬಲಿಯು ನಾವು ಮಾಡುವ ಹಲವಾರು ಅಕೃತ್ಯಗಳಿಗೆ ಪ್ರಾಯಶ್ಚಿತ್ತ ರೂಪದಲ್ಲಿದೆ–

ಯಾಮಳೋಕ್ತ ಪ್ರಕಾರೇಣ ಅರ್ಭಕಂ ಪೃಷದಂಶಕಮ್ ।
ಭ್ರೂಣಹತ್ಯಾ ಗರ್ಭಿಣೀನಾಂ ವಿಷದಾನಪ್ರಯೋಗತಃ ॥

ಸ್ತನಂಧಯಪಯಃಪಾನೇ ವಿಷದಾನಪ್ರಯತ್ನತಃ ।
ಸಪ್ತಜನ್ಮನಿ ಪಾಪಂ ಚ ಜನ್ಮತ್ರಿತಯಪಂಚಸು ॥

ಏತಜ್ಜನ್ಮಕೃತಂ ಪಾಪಂ ನಾರ್ಯಾ ವಾ ಪುರುಷೇಣ ವಾ ।
ಸ್ರಾವಗರ್ಭಂ ಮೃತಾಪತ್ಯಂ ವಾಯುಗರ್ಭಂ ಪುನಃ ಪುನಃ ।
ಅಥವಾ ಜನನಂ ಪುಂಸಾಂ ಮೂಕಃ ಸ್ತಬ್ಧೋ ನಪುಂಸಕಃ ॥

ದರಿದ್ರಃ ಕೃಪಣೀ ಜನ್ಮರೋಗಿಣೀ ಯೋಗದೂಷಿತಾ ।
ಜಾಯಂತೇ ಮೂಢಚಿತ್ತಾಸ್ತು ತತ್ತತ್ಪಾಪಾನುಸಾರತಃ ॥

ಆರಾಧನಾದ್ಧಿ ನಾಗಸ್ಯ ದೋಷಸಂಘಃ ಶಮಂ ವ್ರಜೇತ್ ।
ಏತೈಃ ಪಾಪೈರ್ವಿಮುಕ್ತಸ್ತು ಪುತ್ರಂ ತು ಚಿರಜೀವಿನಮ್ ॥

ದೋಷಾಶ್ಚೈವ ಲಯಂ ಯಾಂತಿ ನಾಗಾರಾಧನ ವೈಭವಾತ್ ।
ಪುತ್ರಪೌತ್ರಾಭಿವೃದ್ಧಿಶ್ಚ ಆಯುರಾರೋಗ್ಯಸಂಪದಃ ।
ಭವಂತಿ ನಿಯಮಾತ್ತಸ್ಯ ಶುಭಮಿತ್ಯಾಹ ಶಂಕರಃ ॥

ಯಾಮಳ ಗ್ರಂಥದಲ್ಲಿ ಈ ರೀತಿ ಹೇಳಲಾಗಿದೆ. ಮಕ್ಕಳಿಗೆ ಯಾವುದೇ ರೀತಿಯ ಹಾನಿ ಮಾಡುವುದು, ಬಿಡಾಲಹನನ ಭ್ರೂಣಹತ್ಯೆ, ಗರ್ಭಿಣಿಯರಿಗೆ ವಿಷ ಕೊಡುವುದು –ಇಂತಹ ಪಾಪಗಳ ಫಲವು ಏಳು ಜನ್ಮಗಳಿಂದಲೂ ಇಳಿದು ಬರುತ್ತದೆ. ಇದರ ಫಲವಾಗಿ ಗರ್ಭಸ್ರಾವ, ನಾನಾರೀತಿಯ ಬಂಜೆತನ, ಮಕ್ಕಳಾದರೂ ಮಕ್ಕಳಿಗೆ ಜಡತ್ವ, ಮೂಕತ್ವ ಆದಿ ದೋಷಗಳು; ದಾರಿದ್ರ್ಯ; ಹುಟ್ಟಿನಿಂದಲೇ ಖಾಯಿಲೆಗಳು, ಬುದ್ಧಿಮೌಢ್ಯ –ಇತ್ಯಾದಿ ದೋಷಗಳು ಆಯಾ ಪಾಪಾನುಸಾರ ಬರುತ್ತದೆ. ಕಲಿಯುಗದಲ್ಲಿ ನಾಗನಿಗೆ ಎರಡು ರೂಪ: ವಿಗ್ರಹರೂಪ ಮತ್ತು ಚಲಿಸುವ ಸರ್ಪರೂಪ. ನಾಗನಿಗೆ ಅಶುದ್ಧಿ ಮಾಡುವುದು, ನಾಗಬನದಲ್ಲಿ ನೆಲ ಅಗೆಯುವುದು, ಮರ ಕಡಿಯುವುದು, ಕೊಡಬೇಕಾದ ಸೇವೆಯನ್ನು ಕೊಡದಿರುವುದು, ನಾಗಗಳು ಸಂಚರಿಸುವ ಜಾಗಕ್ಕೆ ತಡೆಯೊಡ್ಡುವುದು, ನಾಗಬೀದಿ ಯಲ್ಲಿ ಮನೆ ಕಟ್ಟುವುದು, ಸರ್ಪವಿಷಸಂಗ್ರಹ ಮಾಡುವುದು, ಸರ್ಪಸರ್ಪಿಣೀ ಸಮಾಗಮಕ್ಕೆ ವಿಘ್ನಪಡಿಸುವುದು, ಹಾವಾಡಿಗರ ಹಾವನ್ನು ನೋಡುವುದು, ಸ್ಥಳದ ಸರ್ಪವನ್ನು ಅವರ ಕೈಗೆ ಒಪ್ಪಿಸುವುದು, ಹುತ್ತ ಕೆಡಹುವುದು, ಹುತ್ತದ ಬಳಿ ಮನೆ ಕಟ್ಟುವುದು, ಚಿತ್ರಕೂಟಾದಿಹನನ, ಸರ್ಪಗಳು–ಸರ್ಪಮೊಟ್ಟೆಗಳು–ಸರ್ಪಶಿಶುಗಳು –ಇವುಗಳಿಗೆ ಹೆದರಿಕೆ ಹುಟ್ಟಿಸುವುದು, ನಾಗನ ಕಟ್ಟೆ ಒಡೆದುಹಾಕು ವುದು, ನಿಂದಿಸುವುದು, ಹೊಡೆಯುವುದು, ಹಿಂಸೆ ಕೊಡುವುದು, ಯಾವುದೇ ಪ್ರಾಣಿಪಕ್ಷಿಗಳ ಮೊಟ್ಟೆ –ಇತ್ಯಾದಿ ಇರುವ ಮರ ಕಡಿಯುವುದು, ನಾಗಾರಾಧಕರನ್ನು–ನಾಗಮಂಡಲಾದಿಗಳನ್ನು ನಿಂದಿಸುವುದು, ಕಂಡರೂ ಪ್ರಸಾದ ತೆಗೆದುಕೊಳ್ಳದಿರು ವುದು, ಮೃತಸರ್ಪಪರಿತ್ಯಾಗ –ಇತ್ಯಾದಿ ದೋಷಗಳೂ ನಾಗಾರಾಧನೆಯಿಂದ ಪರಿಹಾರವಾಗುತ್ತವೆ. ಈ ಪಾಪಗಳಿಂದ ವಿಮುಕ್ತರಾಗಿ ನಾಗಾರಾಧಕರು ದೀರ್ಘಾ ಯುಷ್ಮಂತರಾದ ಮಕ್ಕಳನ್ನು ಹೊಂದುತ್ತಾರೆ. ಪುತ್ರಪೌತ್ರಾಭಿವೃದ್ಧಿಯೂ, ದೀರ್ಘಾ ಯುಷ್ಯ, ಆರೋಗ್ಯಸಂಪತ್ತುಗಳೂ ಅವರಿಗೆ ಉಂಟಾಗುತ್ತವೆ. ಇದು ಆಶ್ಲೇಷಾಬಲಿ, ಸರ್ಪಸಂಸ್ಕಾರ, ನಾಗಾರಾಧನೆ, ನಾಗಪ್ರತಿಷ್ಠೆ, ತನುತಂಬಿಲಾದಿಗಳಿಗೆಲ್ಲಾ ಭಕ್ತ್ಯನು ಸಾರ ಸಿಗುವ ಫಲಗಳಾಗಿರುತ್ತವೆ.

ನಾಗಪ್ರತಿಷ್ಠೆಗೆ ಇನ್ನೊಂದು ರೀತಿಯಲ್ಲಿ ಫಲ ಹೇಳಿರುತ್ತಾರೆ–

**ಏಕವಕ್ತ್ರಂ ರಾಜವಶ್ಯಂ ದ್ವಿವಕ್ತ್ರಂ ಸುಖಮುಚ್ಯತೇ ।**
**ತ್ರಿವಕ್ತ್ರಂ ಪುತ್ರವೃದ್ಧಿಶ್ಚ ಪಂಚವಕ್ತ್ರಂ ಯಶೋ ಭವೇತ್ ॥**

**ಆರಾಧ್ಯ ಚ ಶುಚಿರ್ಭೂತ್ವಾ ಸರ್ವಸಿದ್ಧಿಮವಾಪ್ನುಯಾತ್ ।**
**ಐಶ್ವರ್ಯಂ ಪುತ್ರವೃದ್ಧಿಂ ಚ ರಾಜವಶ್ಯಂ ಶ್ರಿಯಂ ಯಶಃ ॥**

ಇತ್ಯಾದಿ. ಒಂದ ಹೆಡೆಯ ನಾಗನನ್ನು ಪ್ರತಿಷ್ಠೆ ಮಾಡಿದರೆ ರಾಜವಶ್ಯ ವ್ಯವಹಾರದಲ್ಲಿ ಯಶಸ್ಸು; ೨ ಹೆಡೆಯ ನಾಗನನ್ನು ಪ್ರತಿಷ್ಠೆ ಮಾಡಿದರೆ ಸುಖಸಮೃದ್ಧಿ; ೩ ಹೆಡೆಯ ನಾಗನನ್ನು ಪ್ರತಿಷ್ಠೆ ಮಾಡಿದರೆ ಪುತ್ರಪೌತ್ರಾಭಿವೃದ್ಧಿ; ೫ ಹೆಡೆಯ ನಾಗಪ್ರತಿಷ್ಠೆ ಮಾಡಿದರೆ ಮೊದಲು ಹೇಳಿದ ಎಲ್ಲ ಫಲಗಳೂ ಕೀರ್ತಿಲಾಭವೂ ಉಂಟಾಗುತ್ತದೆ. ಶುದ್ಧಚಿತ್ತರಾಗಿ ಭಕ್ತಿಯಿಂದ ಆರಾಧನೆ ಮಾಡಿದರೆ ಐಶ್ವರ್ಯ ಪುತ್ರವೃದ್ಧಿ, ರಾಜವಶ್ಯತೆ, ಸಂಪತ್ತು–ಕೀರ್ತಿಗಳ ಲಾಭವುಂಟಾಗುತ್ತದೆ.

ನಾಗಾರಾಧನೆಯ ವಿಧಿಯನ್ನು ಅದರ ಪಲವನ್ನು ಸಂಕ್ಷಿಪ್ತವಾಗಿ ಈ ರೀತಿ ತಿಳಿಸುತ್ತಾರೆ. ಈ ವಿಧಾನವನ್ನು ಪ್ರತಿ ದಿವಸ, ತಿಂಗಳಿಗೊಮ್ಮೆ ಅಥವಾ ವರ್ಷಕ್ಕೊಮ್ಮೆ ಶಕ್ತ್ಯನುಸಾರ ಅನುಸರಿಸಬೇಕು.

**ಇತ್ಥಃ ಪ್ರಭೃತಿ ಲೋಕೇಽಸ್ಮಿನ್ ದಿನೇ ನಾಗಪ್ರಪೂಜನಮ್ ।**
**ಯೇ ಕುರ್ವಂತಿ ಸದಾ ತೇಷಾಂ ಧನಧಾನ್ಯಾದಿಸಂಪದಃ ॥**

**ಪುತ್ರಪೌತ್ರಾಭಿವೃದ್ಧಿಶ್ಚ ಸರ್ಪಾದ್ಭಯನಿವಾರಣಮ್ ।**
**ಸರ್ಪಶಾಪ ನಿವೃತ್ತಿಶ್ಚ ಸರ್ವಸಿದ್ಧಿಶ್ಚ ಜಾಯತೇ ॥**

**ಸಂಕರ್ಷಣಾತ್ಮಾ ದೇವೇಷು ಸ್ಥಿತ್ವಾ ಗೃಹ್ಣಾಮ್ಯಹಂ ಸ್ವಯಮ್ ।**
**ಪಂಚಾಮೃತಾಭಿಷೇಕೈಶ್ಚ ಶುದ್ಧೋದಕಸಮನ್ವಿತೈಃ ॥**

**ಗಂಧೈಶ್ಚ ಕೇತಕಾಶೋಕಚಂಪಕಾದಿಸುಮೈಃ ಶುಭೈಃ ।**
**ಕದಲೀ ನಾಲಿಕೇರಾದಿ ಫಲೈರ್ಲಾಜೈಶ್ಚ ಲಡ್ಡುಕೈಃ ॥**

**ನೀರಾಜನೈರ್ಮಂತ್ರಪುಷ್ಪೈಃ ವಟುವಿಪ್ರಾನ್ನದಾನತಃ ।**
**ಪ್ರೀಣಯಂತೋಽಷ್ಟನಾಗೇಂದ್ರ ಪ್ರಸಾದಂ ಪ್ರಾಪ್ನುವಂತಿ ಹಿ ॥**

ನಿಶ್ಚಿತ ದಿವಸಗಳಲ್ಲಿ ಯಾರು ನಾಗಾರಾಧನೆಯನ್ನು ಮಾಡುತ್ತಾರೋ ಅವರಿಗೆ ಧನಧಾನ್ಯಸಮೃದ್ಧಿಯೂ, ಪುತ್ರಪೌತ್ರಾಭಿವೃದ್ಧಿಯೂ, ಸರ್ಪಭಯನಿವೃತ್ತಿಯೂ, ಸರ್ಪಶಾಪನಿವೃತ್ತಿಯೂ, ಸರ್ವಸಿದ್ಧಿಯೂ ಉಂಟಾಗುತ್ತದೆ. ನಾಗಾರಾಧನೆ

ಮಾಡುವಾಗ ನಾಗಾಂತರ್ಗತ ಶ್ರೀಸಂಕರ್ಷಣರೂಪಿ ಪರಮಾತ್ಮನು ಸೇವೆಯನ್ನು ಸ್ವೀಕರಿಸಿ ನಮ್ಮನ್ನು ಅನುಗ್ರಹಿಸುತ್ತಾನೆ. ನಾಗನಿಗೆ ಪಂಚಾಮೃತಾಭಿಷೇಕ, ಶುದ್ಧ ಕಲಶಸ್ನಾನ, ಗಂಧಾದಿಲೇಪನ, ಕೇದಗೆ, ಅಶೋಕ, ಸಂಪಿಗೆ ಮೊದಲಾದ ಸುಗಂಧಭರಿತ ಪುಷ್ಪಾದಿಗಳಿಂದ ಆರಾಧನೆ –ಇವುಗಳಿಂದ ಅಷ್ಟಕುಲನಾಗೇಂದ್ರರನ್ನು ಆರಾಧಿಸಿದರೆ ನಾಗದೇವರ ಅನುಗ್ರಹದಿಂದ ಸರ್ವಾಭೀಷ್ಟಗಳೂ ಸಿದ್ಧಿಸುತ್ತವೆ.

ಶೌನಕರು ಈ ಬಗ್ಗೆ ಹೀಗೆ ಹೇಳುತ್ತಾರೆ–

**'ಏವಂ ಕೃತೇ ನಾಗರಾಜಃ ಪ್ರಸನ್ನೋ ಭವತಿ ಕುಲವೃದ್ಧಿರ್ಭವತಿ, ದೀರ್ಘಾ–ಯುರ್ಭವತೀತ್ಯಾಹ ಭಗವಾನ್ ಶೌನಕಃ'**

ಆಶ್ಲೇಷಾಬಲಿಯನ್ನು ಕೆಲವರು ರಾತ್ರಿ ಹತ್ತು ಗಳಿಗೆಯ ಮೇಲೆ (ರಾತ್ರಿಯ ೨ನೇ ತ್ರಿಭಾಗ) ಮಾಡಿ ಹೋಮ ಆರಾಧನೆಗಳನ್ನು ಮಾರನೆ ದಿನ ಮಾಡುವ ಕ್ರಮವೂ ಇದೆ.

ಆಶ್ಲೇಷಾಬಲಿಯಲ್ಲಿ ೨ ವಿಭಾಗವಿದೆ. ಬ್ರಹ್ಮಲೋಕ, ವಿಷ್ಣುಲೋಕ, ರುದ್ರಲೋಕ, ಧರ್ಮಲೋಕಗಳಲ್ಲಿರುವ ನಾಗದೇವತೆಗಳು, ಅನಂತರ ಶೇಷ ವಾಸುಕಿ ತಕ್ಷಕಾದಿಗಳು ಹಾಗೂ

**ಸರ್ಪಸತ್ರೇ ಚ ಯೇ ಸರ್ಪಾ ಆಸ್ತಿಕೇನಾಭಿರಕ್ಷಿತಾಃ ।**
**ನಮೋऽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಮೇ ಸದಾ ॥**

ಸರ್ಪಸತ್ರದಲ್ಲಿ ಆಸ್ತಿಕ ಮಹರ್ಷಿಯಿಂದ ರಕ್ಷಿಸಲ್ಪಟ್ಟ ನಾಗಗಳು, ಇವರಿಗೆಲ್ಲ ನಮಸ್ಕಾರ; ಅವರು ಈ ಬಲಿಯಿಂದ ಸುಪ್ರೀತರಾಗಲಿ, ಪ್ರಸನ್ನರಾಗಲಿ ಎಂದು ಒಂದು ಮಂತ್ರ ಹೇಳುತ್ತದೆ. ಅದೇ ರೀತಿ–

**ಖಾಂಡವಸ್ಯ ತಥಾ ದಾಹೇ ಸ್ವರ್ಗಂ ಯೇ ಚ ಸಮಾಶ್ರಿತಾಃ ।**
**ನಮೋऽಸ್ತು ತೇಭ್ಯಃ ಸುಪ್ರೀತಾಃ ಪ್ರಸನ್ನಾಃ ಸಂತು ಮೇ ಸದಾ ॥**

ಖಾಂಡವದಹನದಲ್ಲಿ (ಸರ್ಪಸತ್ರದಲ್ಲಿಯೂ) ಸ್ವರ್ಗಸ್ಥರಾದ ನಾಗದೇವತೆಗಳಿಗೂ ನಮಸ್ಕಾರ. ಅವರೂ ಸುಪ್ರೀತರೂ ಪ್ರಸನ್ನರೂ ಆಗಲಿ ಎಂದು ಇನ್ನೊಂದು ಮಂತ್ರ ಹೇಳುತ್ತದೆ.

ನಾಗಮಂಡಲದಲ್ಲಿ ಡಮರು ಇಡೀ ನಾಗಸಂಕುಲದ ಸಂಕೇತವಾಗಿದೆ ಕಿಂಚಿದ್ ಭೇದದೊಂದಿಗೆ ಡಮರುಸೇವೆ, ಹಾಲಿಟ್ಟುಸೇವೆ, ನಾಗಮಂಡಲ ಪರ್ಯಾಯ ಪದಗಳ ಹಾಗೆ ತೋರುತ್ತದೆ.

'ದೇವಾ ವೈ ಸರ್ಪಪ್ರತಿಮಯಾ ಚರಂತಿ' ಎಂಬ ವೇದವಾಕ್ಯವನ್ನನುಸರಿಸಿ ನಾಗಮಂಡಲದಲ್ಲಿ ನಾಗಾರಾಧನೆಯ ಜತೆಯಲ್ಲಿಯೇ ಎಲ್ಲ ದೇವತೆಗಳ ಆರಾಧನೆಯೂ ನಡೆಯುತ್ತದೆ. ಖಾಂಡವದಹನ, ಸರ್ಪಸತ್ರಗಳಲ್ಲಿ ಕೋಟಿಗಟ್ಟಲೆ ನಾಗಕುಲಸಂಹಾರಕ್ಕೆ ಕಾರಣರಾದವರು ಸರ್ವಜನಪ್ರತಿನಿಧಿಗಳಾದ ರಾಜರುಗಳೇ ಎಂಬುದು ಗಮನಾರ್ಹ. ಈ ಸರ್ಪಗಣಗಳ ಶಾಪವು ಇಡೀ ಪ್ರಜಾಸಂಕುಲಕ್ಕೆ ತಟ್ಟಿತು. ಆದರ ಪರಿಹಾರಾರ್ಥವಾಗಿಯೇ ವಿಶೇಷ ರೀತಿಯ ನಾಗಾರಾಧನೆಯು ಪ್ರಚಲಿತವಾಯಿತು. ನಾಗದೇವರೇ ಪರಶುರಾಮಸೃಷ್ಟಿಯಲ್ಲಿ ಕುಲದೇವರಾದ್ದರಿಂದ ಇಲ್ಲಿ ಈ ಕ್ರಿಯಾಭಾಗವು ವಿಶೇಷವಾದ ಆದರವನ್ನು ಪಡೆಯಿತು.

* * *

॥ ಶ್ರೀಃ ॥

# ತಂತ್ರಸಾರೋಕ್ತ ದೇವತಾಪ್ರತಿಷ್ಠಾವಿಧಿಸಂಗ್ರಹಃ

## ನಾಗಪ್ರತಿಷ್ಠಾ – ಚಕ್ರಾಬ್ಜಮಂಡಲಪೂಜಾ – ಬ್ರಹ್ಮಕಲಶ ಇತ್ಯಾದಿ

ನಮೋಽಸ್ತ್ವನಂತ ಸಹಸ್ರಮೂರ್ತಯೇ ಸಹಸ್ರಪಾದಾಕ್ಷಿ ಶಿರೋರುಬಾಹವೇ ।
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ಸಹಸ್ರಕೋಟಿ ಯುಗಧಾರಿಣೇ ನಮಃ ॥

ಪ್ರತಿಷ್ಠಾಪೂರ್ವೇದಿನೇ ಪೂರ್ವಾಹ್ಣೇ ಕೃತನಿತ್ಯಕ್ರಿಯಃ ಸಪತ್ನೀಕಃ ಯಜಮಾನಃ ದೇವಪುರತಃ ಫಲನ್ಯಾಸಂ ಕೃತ್ವಾ ಸಂಭಾರಾನ್ ಗೃಹೀತ್ವಾ ಗೃಹಾತ್ ವಾದ್ಯಘೋಷ–ಪುರಸ್ಸರಂ ಬ್ರಾಹ್ಮಣೈಃ ಸಹ ಸ್ವಸ್ತಿಸೂಕ್ತಪಠನಪೂರ್ವಕಂ ನಾಗಾಲಯಂ ಪ್ರವಿಶೇತ್। ತತ್ರ ಯಜಮಾನಪತ್ನೀ ದೀಪಂ ಪ್ರಜ್ವಾಲ್ಯ, ಯಜಮಾನಃ ಶಿಲ್ಪಿಹಸ್ತಾತ್ ನಾಗಾ–ಲಯಂ ಪರಿಗೃಹ್ಯ ಸಪರಿವಾರಂ ಶಿಲ್ಪಿನಂ ಬಹುಮಾನಾದಿನಾ ಸಂತೋಷಯೇತ್।

### ಶಿಲ್ಪಿಪೂಜಾ

ಸ್ವಸ್ತಿಕಾಯಾಂ ಶಿಲ್ಪಿಶಸ್ತ್ರಾದಿಕಂ ನಿಕ್ಷಿಪ್ಯ ಪೂಜಾಂ ಕುರ್ಯಾತ್ ॥

ದೇವಾಲಯ ನಿರ್ಮಾಣಕಾಲೇ ಜನಿತ ತಾಡನಾದಿ ದೋಷಪರಿಹಾರಾರ್ಥಂ ಶಿಲ್ಪಿಶಸ್ತ್ರಪೂಜಾಂ ಕರಿಷ್ಯೇ.

ಭೇದಿನೀ ಭೇದಿನೀ ಘೃಷ್ಟಾ ಹಸ್ತಿನೀ ತಾಡಿನೀ ತಥಾ ।
ನವಾಗಾರ ಪ್ರವೇಶೇಷು ಪಂಚೈತಾಃ ಭೇದ ಮಾತರಃ ॥

ಏತಾಃ ದೇವತಾಃ ಆವಾಹ್ಯ ಷೋಡಶೋಪಚಾರೈಃ ಪೂಜಯೇತ್ ॥

ಶಿಲ್ಪಿನಂ ಪ್ರಾರ್ಥಯೇತ್

ದಾರುಭಿಃ ನಿರ್ಮಿತಂ ಗೇಹಂ ದೃಢಂ ಸೌಮ್ಯಶಿಲಾಮಯಮ್ ।
ಹರೇಃ ಪ್ರತಿಷ್ಠಾಪನಾರ್ಥಾಯ ದೇಹಿ ತ್ವಂ ಶಿಲ್ಪಿ ಸತ್ತಮ ॥
ತ್ವಯಾ ಕೃತಮಿದಂ ಗೇಹಂ ಪ್ರತಿಷ್ಠಾಯೈ ರಮೇಶಿತುಃ ।
ದೇಹಿ ಮೇ ಶಿಲ್ಪಿ ಶಾಸ್ತ್ರಜ್ಞ ಮೌಲ್ಯಂ ಸ್ವೀಕೃತ್ಯ ಹರ್ಷಿತಃ ॥

ಶಿಲ್ಪೀ: ತ್ವಯಾ ಕೃತಂ ತು ಯತ್ಪುಣ್ಯಂ ದಶಾಂಶಂ ದೇಹಿ ಮೇ ವಿಭೋ ।
ತದ್ ಗೃಹೀತ್ವಾ ಮುದಾ ಗೇಹಂ ಪ್ರದಾಸ್ಯಾಮಿ ನರೋತ್ತಮ ॥

**ಯಜಮಾನಃ**

**ವಿಷ್ಣೋಃಶ್ಚ ಸ್ಥಾಪನಾತ್ ಯತ್ ಪುಣ್ಯಂ ನದಾಸ್ಯಾಮಿ ಕದಾಚನ ।**
**ತ್ವಯೇಪ್ಸಿತಂ ಧನಂ (ದತ್ವಾ) ರತ್ನಂ ಗೃಹಾಣಾಲಯಕಾರಕ ॥**

**ಶಿಲ್ಪಿಃ ಮಯಾಕೃತಂ ಇದಂ ಗೇಹಂ ಆಜ್ಞಯಾ ತವ ವೈ ಪ್ರಭೋ ।**
**ಪ್ರಯಚ್ಛಾಮಿ ಪ್ರತಿಷ್ಠಾರ್ಥಂ ವೃದ್ಧಿರ್ಭವತು ತೇ ಸದಾ ॥**
**ಮಯಾಕೃತಮಿದಂ ಗೇಹಂ ದೃಢಂ ಸೌಮ್ಯಂ ಸುದಾರುಭಿಃ ।**
**ಗೃಹಾಣಾಹಂ ಪ್ರದಾಸ್ಯಾಮಿ ಪ್ರತಿಷ್ಠಾಯೈ ರಮೇಶಿತುಃ ॥**

ತತಃ ದ್ವಾರೇ ತೋರಣನ್ಯಾಸಂ ಕುರ್ಯಾತ್ ।

**ತೋರಣಮುಹೂರ್ತಮ್ :** ತತಃ ದ್ವಾರಸಮೀಪೇ ಸ್ವಸ್ತಿಕಾಯಾಂ ತೋರಣಂ ಸ್ಥಾಪ್ಯ ಹರಿದ್ರಾಕುಂಕುಮಪುಷ್ಪಾದಿನಾ ಅಲಂಕೃತ್ಯ- 'ತೋರಣ ದೇವತಾಭ್ಯೋ ನಮಃ ।' ಷೋಡಶೋಪಚಾರಪೂಜಾಂ ಸಮರ್ಪ್ಯ ಪ್ರಾರ್ಥಯೇತ್ ॥

**ದೇವಾಃ ತೋರಣರೂಪೇಣ ಸಂಸ್ಥಿತಾಃ ಯಜ್ಞಮಂಡಪೇ ।** (ದ್ವಾರಮಂಟಪೇ)
**ವಿಘ್ನವಿಧ್ವಂಸನಾರ್ಥಾಯ ರಕ್ಷಾರ್ಥಂ ಹ್ಯಧ್ವರಸ್ಯ ಚ ॥**
**ಮಂಗಲಂ ಭಗವಾನ್ ವಿಷ್ಣುಃ ......... ಗರುಡಧ್ವಜಃ ॥**
**ತದೇವಲಗ್ನಂ ಸುದಿನಂ ತದೇವ .......... ತೇಽಂಘ್ರಿಯುಗಂ ಸ್ಮರಾಮಿ ॥**

ಇತ್ಯಾದ್ಯುಕ್ತ್ವಾ ಭಗವನ್ನಾಮಸ್ಮರಣಪೂರ್ವಕಂ ದ್ವಾರೇ ತೋರಣಂ ಸ್ಥಾಪಯೇತ್। ತಾಲತ್ರಯ ದಿಗ್ಬಂಧನ ಅಗ್ನಿಪ್ರಾಕಾರಾದಿಕಂ ಕುರ್ಯಾತ್ ॥

**ಸಂಭಾರ ಕೋಷ್ಠಮುಹೂರ್ತಮ್–**

ಸಂಭಾರಸಹಿತಂ ಕೋಷ್ಠಂ ಪ್ರವಿಶ್ಯ ಕೋಷ್ಠೇ ಈಶಾನ್ಯದಿಶಿ ದೀಪಂ ಪ್ರಜ್ವಾಲ್ಯ ಸ್ವಸ್ತಿಕೋಪರಿ ಸಗದಂ ಭೀಮರೂಪಿಣಂ ಭಾರತೀಶಂ ತದಂತರ್ಯಾಮಿ ಪರಮಾತ್ಮಾನಂ ಆವಾಹ್ಯ ಪೂಜಯಿತ್ವಾ ಪ್ರಾರ್ಥಯೇತ್ ।

ಋಷಭಂ ಮೇತಿ ಪಂಚರ್ಚಸ್ಯ ಋಷಭೋವೈರಾಜಋಷಿಃ । ಅನುಷ್ಟುಪ್ ಛಂದಃ । ಪಂಚಮೀ ಮಹಾಪಂಕ್ತಿಃ । ಸಪತ್ನಘ್ನೋದೇವತಾ । ಕಲಿನಿರಸನಾರ್ಥೇ ಜಪೇ ವಿನಿಯೋಗಃ ॥

**ಓಮ್ ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾಸಹಿಮ್ । ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಮ್ ॥ ೧ ॥ ಅಹಮಸ್ಮಿ**

ಸಪತ್ನಹೇಂದ್ರ ಇವಾರಿಷ್ಟೋ ಅಕ್ಷತಃ । ಅಧಃ ಸಪತ್ನಾ ಮೇ ಪದೋರಿಮೇ ಸರ್ವೇ ಅಭಿಷ್ಠಿತಾಃ ॥ ೨ ॥ ಅತ್ರೈವ ವೋಽಪಿ ನಹ್ಯಾಮ್ಯುಭೇ ಆರ್ತ್ನೀ ಇವ ಜ್ಯಯಾ । ವಾಚಸ್ಪತೇ ನಿ ಷೇಧೇಮಾನ್, ಯಥಾ ಮದಧರಂ ವದಾನ್ ॥ ೩ ॥ ಅಭಿಭೂರಹಮಾಗಮಂ ವಿಶ್ವಕರ್ಮೇಣ ಧಾಮ್ನಾ । ಆ ವಶ್ಚಿತ್ತಮಾ ವೋ ವ್ರತಮಾ ವೋಽಹಂ ಸಮಿತಿಂ ದದೇ ॥ ೪ ॥ ಯೋಗಕ್ಷೇಮಂ ವ ಆದಾಯಾಹಂ ಭೂಯಾಸಮುತ್ತಮ ಆ ವೋ ಮೂರ್ಧಾನಮಕ್ರಮೀಮ್ । ಅಧಸ್ಪದಾನ್ಮ ಉದ್ವದತ ಮಂಡೂಕಾ ಇವೋದಕಾನ್ಮಂಡೂಕಾ ಉದಕಾದಿವ ॥ ೫ ॥ ತಾಲತ್ರಯ ದಿಗ್ಬಂಧನ ಅಗ್ನಿಪ್ರಾಕಾರಾದಿಕಂ ಕೃತ್ವಾ ರಕ್ಷಾಂ ಕುರ್ಯಾತ್ ॥

## ಸಪ್ತಶುದ್ಧಿಃ

**ಸಂಕಲ್ಪಃ** –ಭೂಗತಕೇಶಾಂಗಾರವಲ್ಮೀಕಲೋಷ್ಠಾಶ್ಮದೋಷಪರಿಹಾರಾರ್ಥಂ ಭೂಶುದ್ಧ್ಯರ್ಥಂ ಸಪ್ತಶುದ್ಧ್ಯಾಖ್ಯಂ ಕರ್ಮ ಕರಿಷ್ಯೇ ॥

೧. **ಖನನಮ್** –ರಾಕ್ಷೋಘ್ನಸೂಕ್ತೇನ ನಾಗಾಲಯೇ ಆಗ್ನೇಯದಿಶಿ ಹಸ್ತಮಾತ್ರಪ್ರಮಾಣಂ ಭೂಮಿಂ ಖಾತ್ವಾ

ಓಮ್ಅಗಸ್ತ್ಯಃ ಖನಮಾನಃ ಖನಿತ್ರೈಃ ಪ್ರಜಾಮಪತ್ಯಂ ಬಲಮಿಚ್ಛಮಾನಃ। ಉಭೌ ವರ್ಣಾವೃಷಿರುಗ್ರಃ ಪುಪೋಷ ಸತ್ಯಾ ದೇವೇಷ್ವಾಶಿಷೋ ಜಗಾಮ ॥

೨. **ಹರಣಮ್** – 'ಪಿಶಂಗಭೃಷ್ಟಿಂ' । 'ಓಂ ನಮೋ ಭಗವತೇ ಮಹಾಸುದರ್ಶ–ನಾಯ ಮಹಾಚಕ್ರಾಯ ಮಹಾಬಲಾಯ ದೀಪ್ತರೂಪಾಯ ಸರ್ವತೋ ರಕ್ಷ ರಕ್ಷ । ಓಂ ಸಹಸ್ರಾರ ಹುಂ ಫಟ್ । ಇತ್ಯನೇನ ಮೃದಂ ಸಂಗೃಹ್ಯ ನೈರ್ಋತ್ಯಾಂ ನಿರಸೇತ್ ॥

೩. **ದಾಹಃ** (ಭೂಶುದ್ಧಿ ಹೋಮಃ) – ತತ್ರೈವ ಸ್ಥಂಡಿಲೇ ಔಪಾಸನತಂತ್ರೇಣ ಅಗ್ನಿಂ ಪ್ರತಿಷ್ಠಾಪ್ಯ "ಓಂ ಹೂಂ ನಮೋ ಭಗವತೇ ವರಾಹರೂಪಾಯ ಭೂರ್ಭುವಃ ಸ್ವಃ ಪತಯೇ ಭೂಪತಿತ್ವಂ ದೇಹಿ ದದಾಪಯ ಸ್ವಾಹಾ ॥"

